## ಪಠ್ಯಾಧಾರಿತ ಅಭ್ಯಾಸ

**ಅ) ಒಂದೊಂದು ವಾಕ್ಯದಲ್ಲಿ ಉತ್ತರಿಸು.**

೧. ರಥಬೀದಿ ಹೇಗೆ ಕಂಗೊಳಿಸುತ್ತಿತ್ತು?

________________________________

೨. ಕಂಸಾಳೆ ಎಂದರೇನು?

________________________________

೩. ದೇವರಗುಡ್ಡರು ಎಂದು ಯಾರನ್ನು ಕರೆಯುತ್ತಾರೆ?

________________________________

೪. ಡೊಳ್ಳು ಎಂದರೇನು?

________________________________

೫. ಡೊಳ್ಳು ಕುಣಿತದವರು ಯಾರ ಭಕ್ತರು?

________________________________

೬. ರಂಗಸ್ಥಳ ಎಂದರೇನು?

________________________________

೭. ಯಾರನ್ನು ಭಾಗವತರೆಂದು ಕರೆಯುತ್ತಾರೆ?

________________________________

**ಆ) ಎರಡು–ಮೂರು ವಾಕ್ಯಗಳಲ್ಲಿ ಉತ್ತರಿಸು.**

೧. ಬೀಸು ಕಂಸಾಳೆ ಎಂದರೇನು?

________________________________

________________________________

೨. ಕಂಸಾಳೆಯವರು ಹಾಡುತ್ತಾ ಹೇಗೆ ನರ್ತಿಸುತ್ತಾರೆ?

________________________________

________________________________

೩. ಡೊಳ್ಳು ಕುಣಿತವನ್ನು ಯಾವ ಸಂದರ್ಭದಲ್ಲಿ ಮಾಡುತ್ತಾರೆ?

________________________________

________________________________

೪. ಯಕ್ಷಗಾನ ಬಯಲಾಟ ಎಂದರೇನು?

________________________________________

________________________________________

೫. ಯಕ್ಷಗಾನ ಬಯಲಾಟದ ಮುಖ್ಯ ಅಂಗಗಳಾವುವು?

________________________________________

________________________________________

**ಇ) ಈ ವಾಕ್ಯಗಳಲ್ಲಿ ಬಿಟ್ಟಿರುವ ಶಬ್ದಗಳನ್ನು ತುಂಬು.**

೧. ರಾಜು ಮತ್ತು ಕಮಲ ____________ ಜೊತೆ ಜಾತ್ರೆಗೆ ಹೋದರು.

೨. ಜಾತ್ರೆಯಲ್ಲಿ ನೋಡಿದಲ್ಲೆಲ್ಲಾ ____________ ನೆರೆದಿತ್ತು.

೩. ಯಕ್ಷಗಾನ ಬಯಲಾಟದ ಅಂದಿನ ಪ್ರಸಂಗ ____________

೪. ಜಾತ್ರೆಯಲ್ಲಿ ಭಕ್ತರು ____________ ಎಳೆಯುತ್ತಿದ್ದರು.

**ಈ) ಈ ಕಲೆಯ ಪ್ರಕಾರಗಳಿಗೆ ಅದು ಹೆಚ್ಚಾಗಿ ಕಂಡುಬರುವ ಜಿಲ್ಲೆಗಳನ್ನು ಹೊಂದಿಸಿ ಬರೆ.**

| ಅ | ಆ | |
|---|---|---|
| ಡೊಳ್ಳು ಕುಣಿತ | ದಕ್ಷಿಣ ಕನ್ನಡ ಜಿಲ್ಲೆ | ____________ |
| ಕಂಸಾಳೆ | ಬಾಗಲಕೋಟೆ | ____________ |
| ಯಕ್ಷಗಾನ ಬಯಲಾಟ | ಮೈಸೂರು | ____________ |

**ಉ) ಈ ಮಾತುಗಳನ್ನು, ಯಾರು, ಯಾರಿಗೆ ಹೇಳಿದರು ? ಬರೆ.**

೧. 'ಇವರು ಮಲೆಯ ಮಹದೇಶ್ವರನ ಭಕ್ತರಾದ ದೇವರ ಗುಡ್ಡರು'

________________________________________

________________________________________

೨. 'ತಾತ ಅದೇನದು ಅಲ್ಲಿ ನಡೆಯುತ್ತಿರುವುದು'

________________________________________

________________________________________

## ಸಾಮರ್ಥ್ಯಾಧಾರಿತ ಅಭ್ಯಾಸ

ಅ) ಈ ಶಬ್ದಗಳನ್ನು ಬಳಸಿ ಅರ್ಥಪೂರ್ಣ ವಾಕ್ಯ ರಚಿಸು.

೧. ಕುತೂಹಲ : ____________________

೨. ಬಾರಿಸು : ____________________

೩. ಭಿನ್ನಭಿನ್ನ : ____________________

೪. ಅಭಿನಯ : ____________________

ಆ) ಇಲ್ಲಿನ ಮೂರು ಮನೆಗಳಲ್ಲಿರುವ ಪದಗಳನ್ನು ಕ್ರಮವಾಗಿ ಬಳಸಿ ಅರ್ಥಪೂರ್ಣ ವಾಕ್ಯಗಳನ್ನು ಬರೆ.

| | | |
|---|---|---|
| ನೀವು | | ಬರುತ್ತದೆ |
| ರಾಜು | | ಬಂದರು |
| ಕಮಲ | ಊರಿಗೆ | ಬಂದನು |
| ಅವರು | | ಬಂದಳು |
| ಅದು | | ಬನ್ನಿ |

| |
|---|
| ೧ |
| ೨ |
| ೩ |
| ೪ |
| ೫ |



## ಭಾಷಾಭ್ಯಾಸ

ಅ) ಇಲ್ಲಿ ಕೊಟ್ಟಿರುವ ವಿವರವು ನಡೆದುಹೋಗಿರುವ ಘಟನೆಯದ್ದಾಗಿದೆ. ಅಡಿಗೆರೆ ಎಳೆದಿರುವ ಪದಗಳನ್ನು ಮಾತ್ರ ಬದಲಿಸಿ ಮುಂದೆ ನಡೆಯಲಿರುವ ಘಟನೆಯಂತೆ ಬದಲಿಸಿ ಬರೆ.

ರಾಜು ಓಟದ ಸ್ಪರ್ಧೆಯಲ್ಲಿ ಓಡಿದನು. ಸ್ಪರ್ಧೆಯಲ್ಲಿ ಗೆದ್ದನು. ಅವನಿಗೆ ಬಹುಮಾನ ನೀಡಿದರು.

ರಾಜು ಬಹುಮಾನ ಪಡೆದುಕೊಂಡನು. ಜನರು ಚಪ್ಪಾಳೆ ತಟ್ಟಿದರು. ರಾಜು ಸಂತೋಷದಿಂದ ನಕ್ಕನು.

____________________

____________________

____________________

____________________

ಪಾಠ ೧೨

# ಥಟ್ಟನೆ ಹೇಳಿರಿ (ಪದ್ಯ)

**ಸಾಮರ್ಥ್ಯ :** ಕಥನ ವಿವರಣೆ ಮತ್ತು ಒಗಟುಗಳನ್ನು ಆಲಿಸುವುದರ ಜೊತೆಗೆ ಅರ್ಥ ಮಾಡಿಕೊಳ್ಳುವುದು

**ಓದಿಗೆ ಮುನ್ನ**

ಒಂದು ಜೀವಿಯ ಬಗೆಗೆ ನೀನೇ ಪ್ರಯತ್ನಪೂರ್ವಕವಾಗಿ ಪರಿಚಯ ಮಾಡಿಕೊಂಡಿರಬಹುದು ಅಥವಾ ಇತರರು ಪರಿಚಯಿಸಿರಬಹುದು. ಜೀವಿಯು ತಾನೇ ಪರಿಚಯ ಮಾಡಿಕೊಂಡರೆ ಹೇಗಿರುತ್ತದೆ? ಈ ಕವನದ ಮೂಲಕ ತಿಳಿ.

ಹಕ್ಕಿಯ ತೆರದಲಿ ನಭದಲಿ ಹಾರುವೆ
ರೆಕ್ಕೆಗಳೆನಗಿಲ್ಲ,
ಮರಿಗಳ ಹೆರುತಲಿ ಮೊಲೆಯನ್ನುಣಿಸುವೆ
ಕಾಡಿನ ಮೃಗವಲ್ಲ



ಕರಿಕರಿ ಬಣ್ಣದ ಕೊಡೆಯನು ಬಿಡಿಸುತ
ಅಲೆವೆನು ಇರುಳಲ್ಲಿ,
ಎನ್ನಯ ಬಂಧುಗಳೆಲ್ಲರ ಕೂಡುತ
ನಿದ್ರಿಪೆ ಹಗಲಲ್ಲಿ.



ವೃಕ್ಷಗಳಲ್ಲಿ ತಲೆಕೆಳಗಿರಿಸುತ
ತೊಟ್ಟಿಲ ತೂಗುವೆನು,
ತೋಟಗಳಲ್ಲಿ ಬೇಟೆಯನಾಡುತ
ಹಣ್ಗಳನುಣ್ಣುವೆನು



'ಬಾವಿ'ಯ ಆದಿಲಿ 'ಭವನ'ದ ನಡುವಲಿ
'ಬೇಲಿ'ಯ ಕೊನೆಯಲ್ಲಿ,
ಎನ್ನದೆ ಹೆಸರಿದೆ ಥಟ್ಟನೆ ಪೇಳಿರಿ
ಮೂರಕ್ಷರಗಳಲಿ.

–ಮುಂಡಾಜೆ ರಾಮಚಂದ್ರ ಭಟ್ಟ

## ಓದಿ ತಿಳಿ

ನಭ–ಆಕಾಶ; ಅಲೆದಾಡು–ಸುತ್ತಾಡು, ತಿರುಗಾಡು; ತೆರ–ರೀತಿ; ಮೊಗ–ಮುಖ; ಭವನ–ದೊಡ್ಡಮನೆ; ಕರಿ–ಕಪ್ಪು; ಪರಿ–ರೀತಿ; ಮೃಗ–ಪ್ರಾಣಿ; ವೃಕ್ಷ–ಮರ; ಪೇಳು–ಹೇಳು

## ಪಠ್ಯಾಧಾರಿತ ಅಭ್ಯಾಸ

### ಅ. ಒಂದು ಪದ/ವಾಕ್ಯದಲ್ಲಿ ಉತ್ತರಿಸು.

೧. ಹಕ್ಕಿಯ ಹಾಗೆ ಆಕಾಶದಲ್ಲಿ ಹಾರಾಡುವ ಜೀವಿ ಯಾವುದು?

________________________________

೨. ಬಾವಲಿಯು ಯಾವಾಗ ನಿದ್ರಿಸುತ್ತದೆ?

________________________________

೩. ಈ ಕವನದಲ್ಲಿ ತನ್ನಲ್ಲಿ ಏನಿಲ್ಲ ಎಂದು ಬಾವಲಿ ಹೇಳಿದೆ?

________________________________

೪. ಬಾವಲಿಯು ಯಾವ ಸಮಯದಲ್ಲಿ ಅಲೆಯುತ್ತದೆ?

________________________________

೫. ಬಾವಲಿಯು ಏನನ್ನು ಉಣ್ಣುತ್ತದೆ?

________________________________



### ಆ. ಎರಡು, ಮೂರು ವಾಕ್ಯಗಳಲ್ಲಿ ಉತ್ತರಿಸು.

೧. ಬಾವಲಿಯ ರೂಪವನ್ನು ನಿನ್ನದೇ ಆದ ಮಾತಿನಲ್ಲಿ ಬರೆ.

________________________________

________________________________

೨. 'ಬಾವಲಿ' ಎಂಬುದಕ್ಕೆ ಈ ಪದ್ಯದಲ್ಲಿ ಬರುವ ಒಗಟು ಯಾವುದು?

________________________________

________________________________

೩. ಪ್ರಾಣಿಗಳಿಗಿಂತ ಬಾವಲಿಯು ಭಿನ್ನ ಹೇಗೆ?

________________________________________

________________________________________

೪. ತನ್ನಲ್ಲಿ ಏನೇನಿದೆ ಎಂದು ಬಾವಲಿಯು ಹೇಳಿದೆ?

________________________________________

________________________________________

೫. ಬಾವಲಿಯು ನಿದ್ರಿಸುವ ಬಗೆ ಹೇಗೆ?

________________________________________

________________________________________

## ಇ. ಸಮಾನಾರ್ಥಕ ಪದಗಳನ್ನು ಬರೆ.

೧. ನಭ – ____________________

೨. ಭವನ – ____________________

೩. ಮೊಗ – ____________________

## ಈ. ಈ ಪದ್ಯವನ್ನು ಪೂರ್ಣಗೊಳಿಸು.

ವೃಕ್ಷಗಳಲ್ಲಿ ____________________

____________________ ತೂಗುವೆನು.

ತೋಟಗಳಲ್ಲಿ ____________________

____________________ ಹಣ್ಗಳನುಣ್ಣುವೆನು.



## ಸಾಮರ್ಥ್ಯಾಧಾರಿತ ಚಟುವಟಿಕೆ

## ಅ. ಈ ಒಗಟುಗಳನ್ನು ಬಿಡಿಸಿ ಸರಿ ಉತ್ತರವನ್ನು ಆವರಣದಿಂದ ಆರಿಸಿ ಬರೆ. [ನಾಲಗೆ, ಮೀನು, ಕಮಲ]

೧. ನೀರಲ್ಲೇ ಹುಟ್ಟುತ್ತದೆ.
ನೀರಲ್ಲೇ ಬೆಳೆಯುತ್ತದೆ.
ನೀರಲ್ಲೇ ಸಾಯುತ್ತದೆ.

೨. 'ನಾಡಿನ'ಲ್ಲಿ ಮೊದಲಿರುವೆ
'ಕೆಲಸ'ದಲ್ಲಿ ನಡುವಿರುವೆ
'ಕೊಡುಗೆ'ಯಲ್ಲಿ ಕಡೆಗಿರುವೆ
ನುಡಿ ನಾ ಯಾರೆಂದು?

೩. ನೀರಿನಲ್ಲಿದ್ದರೆ ಗಿಲಿಗಿಲಿ
ನೀರ ಹೊರಗಿದ್ದರೆ ವಿಲಿವಿಲಿ
ಕಡಲ ಕಾಗೆಗೆ ನಾ ಮಿರಿಮಿರಿ

**ಆ. ಈ ಕೆಳಗಿನ ಒಗಟುಗಳಿಗೆ ಉತ್ತರ ಬರೆ.**

೧. ಅಜ್ಜನ ದುಡ್ಡು ಎಣಿಸೋಕಾಗಲ್ಲ, ಅಜ್ಜಿಯ ಸೀರೆ ಮಡಿಸಕ್ಕಾಗಲ್ಲ. ________

೨. ಚಿನ್ನದ ಹಕ್ಕಿ ಬಾಲದಿಂದ ನೀರು ಕುಡಿಯುತ್ತದೆ. ________

೩. ಕಟ್ಟೆ ಇಲ್ಲದ ಕೆರೆಯಲ್ಲಿ ತಟ್ಟೆ ತೇಲಿಕೊಂಡು ಬರುತ್ತೆ. ________

## ಭಾಷಾ ಚಟುವಟಿಕೆ

**ಅ. ಕೊಟ್ಟಿರುವ ಜೋಡಿ ಅಕ್ಷರ/ಪದಗಳನ್ನು ಸ್ಪಷ್ಟವಾಗಿ ಉಚ್ಚಾರ ಮಾಡು ಧ್ವನಿ ಹಾಗೂ ಅರ್ಥ ವ್ಯತ್ಯಾಸವನ್ನು ತಿಳಿ.**

ಅ – ಹ = ಅಕ್ಕಿ – ಹಕ್ಕಿ

ಆ – ಹಾ = ಆದಿ – ಹಾದಿ

ನ – ಣ = ಅನ್ನ – ಅಣ್ಣ

ಲ – ಳ = ಅಲೆ – ಅಳೆ

ಒ – ವ = ಒಡೆ – ವಡೆ

ದ – ಧ = ದನ – ಧನ

ಬಾ – ಭಾ = ಬಾನು – ಭಾನು

## ಆ. ಸುಳಿವನ್ನು ಬಳಸಿಕೊಂಡು ಪದಬಂಧವನ್ನು ಪೂರ್ಣಗೊಳಿಸು.

| | | | | | | |
|---|---|---|---|---|---|---|
| ೧. ಆ | | | | | | ೨. ಕ |
| | | | | | ೩. ಹ | |
| | | | ೪. ಮೊ | | | |
| ೫. ಕಾ | | | | | | ೬. ಹಾ |
| | | | ೭. ಹ | | | |

### ಎಡದಿಂದ ಬಲ

೧. ಬಾವಲಿಯು ಪಕ್ಷಿಯಂತೆ ಅಲ್ಲಿ ಹಾರುತ್ತದೆ(೩)

೩. ಬಾವಲಿಯ ಆಹಾರ (೨)

೪. ಇದು ಮುಖ ಎನ್ನುವುದಕ್ಕೆ ಸಮಾನಾರ್ಥಕ ಪದ (೨)

೫. ಹೆಚ್ಚು ಮರಗಳಿರುವ ಪ್ರದೇಶ (೨)

೭. ಬಾವಲಿಯು ಈ ಸಮಯದಲಿ ನಿದ್ರಿಸುತ್ತದೆ

### ಮೇಲಿನಿಂದ ಕೆಳಗೆ

೧. ಮೊದಲು ಎಂಬುದಕ್ಕೆ ಹೀಗೂ ಹೇಳುವರು(೨)

೨. ಇದು ನೋಡಲು ಬಳಸುವ ಅಂಗ (೨)

೪. ಹೂ ಮೊದಲು ಈ ರೂಪದಲ್ಲಿರುತ್ತದೆ (೨)

೫. ನಡೆಯಲು ಬೇಕಾದ ದೇಹದ ಭಾಗ (೨)

೬. ಬಾವಲಿ ಮರಿಗಳಿಗೆ ಇದನ್ನು ಕುಡಿಸುತ್ತದೆ (೨)





ಪಾಠ ೧೩

# ಹೊಯ್ಸಳ

**ಸಾಮರ್ಥ್ಯ:** ಅಪರಿಚಿತ ಸನ್ನಿವೇಶದಲ್ಲಿನ ಸಂಭಾಷಣೆ ಮತ್ತು ಸಂವಾದಗಳನ್ನು ಅರ್ಥ ಮಾಡಿಕೊಳ್ಳುವುದು

**ಓದಿಗೆ ಮುನ್ನ :** ಪ್ರತಿಯೊಂದು ಪ್ರವಾಸಿ ತಾಣವೂ ತನ್ನದೇ ಆದ ವೈಶಿಷ್ಟ್ಯ ಹಾಗೂ ಇತಿಹಾಸವನ್ನು ಹೊಂದಿದೆ. ಆ ದೃಷ್ಟಿಯಲ್ಲಿ ಬೇಲೂರಿನ ವೈಶಿಷ್ಟ್ಯವನ್ನು ಈ ಪಾಠದ ಮೂಲಕ ತಿಳಿ.



*(ಶಾಲಾ ಮಕ್ಕಳು ಪ್ರವಾಸಕ್ಕೆ ಹೊರಟರು. ಬಸ್ಸು ಬೇಲೂರನ್ನು ಸಮೀಪಿಸುತ್ತಿತ್ತು.)*

**ವರುಣ** : ಗುರುಗಳೇ, ಅಲ್ಲಿ ಕಾಣಿಸುತ್ತಿರುವ ಊರು ಯಾವುದು?

**ಶಿಕ್ಷಕ** : ಅದು ಬೇಲೂರು.

**ರಮಾ** : ಅಲ್ಲಿರುವ ದೇವಾಲಯ ಯಾವುದು ಗುರುಗಳೇ?

**ಶಿಕ್ಷಕ** : ಅದು ಚೆನ್ನಕೇಶವ ದೇವಾಲಯ.

*(ಅಷ್ಟರಲ್ಲಿ ಬಸ್ಸು ದೇವಾಲಯವನ್ನು ತಲುಪಿತು. ಬಸ್ಸಿನಿಂದಿಳಿದ ಮಕ್ಕಳು ಪ್ರಾಂಗಣವನ್ನು ಪ್ರವೇಶಿಸುತ್ತಿದ್ದಂತೆಯೇ, ಅಲ್ಲಿನ ಶಿಲ್ಪಕಲೆಯನ್ನು ನೋಡಿ ಅಚ್ಚರಿಗೊಂಡರು.)*



**ಶಂಕರ** : ಏ, ನೋಡ್ರೋ, ಈ ದೇವಾಲಯ ಎಷ್ಟು ದೊಡ್ಡದಾಗಿದೆ! ಪೂರ್ಣ ಕಲ್ಲಿನಿಂದಲೇ ಮಾಡಿದ್ದಾರೆ.

**ಶಿಕ್ಷಕಿ** : ಹೌದು ಶಂಕರ, ನೀನು ಹೇಳಿದ್ದು ಸರಿ, ಇಲ್ಲಿನ ಶಿಲ್ಪಕಲೆಯು ನೋಡಲು ತುಂಬಾ ಮೋಹಕವಾಗಿದೆ. ಬನ್ನಿ, ಹತ್ತಿರ ಹೋಗಿ ಅವುಗಳ ಬಗ್ಗೆ ತಿಳಿಯೋಣ.

**ಮಕ್ಕಳು** : ಆಯ್ತು ಗುರುಗಳೇ

*(ಶಿಕ್ಷಕರು ಹಾಗೂ ವಿದ್ಯಾರ್ಥಿಗಳು ದೇವಾಲಯದತ್ತ ನಡೆದರು)*

**ಶಿಕ್ಷಕ** : ಇಲ್ಲಿ ನೋಡಿ ಮಕ್ಕಳೇ, ನಾಲ್ಕು ಅಡಿ ಎತ್ತರದ ನಕ್ಷತ್ರಾಕಾರದ ಜಗಲಿಯ ಮೇಲೆ ಈ ದೇವಾಲಯವು ನಿರ್ಮಾಣವಾಗಿದೆ.

**ಶಿಕ್ಷಕಿ** : ಈ ದೇವಾಲಯದ ಸುತ್ತಲಿನ ಮೂಲೆ ಮೂಲೆಗಳಲ್ಲಿ ತೊಲೆಗಳಿಗೆ ಅಂಟಿಕೊಂಡಿರುವಂತಹ ಮದನಿಕಾ ವಿಗ್ರಹಗಳು ತಮ್ಮ ಅಪೂರ್ವ ಸೌಂದರ್ಯದಿಂದ ನಯನ ಮನೋಹರವಾಗಿವೆ. ಇವು ಆಗಿನ ಕಾಲದ ಶಿಲ್ಪಿಗಳ ಕಲಾ ಚಾತುರ್ಯಕ್ಕೆ ನಿದರ್ಶನವಾಗಿದೆ.

**ಶಿಕ್ಷಕ** : ಮಕ್ಕಳೇ, ಬನ್ನಿ. ದೇವಾಲಯದ ಹೊರಗಡೆಯ ಸುತ್ತಲೂ ಇರುವ ಚಿತ್ರ ಪಟ್ಟಿಕೆಗಳನ್ನು ಹಾಗೂ ಕೆತ್ತನೆಗಳನ್ನು ನೋಡುವಾ. ಅವು ಹಲವು ಪೌರಾಣಿಕ ಘಟನೆಗಳನ್ನು ಹೇಳುತ್ತವೆ.

*(ಮಕ್ಕಳು ಪ್ರತಿಯೊಂದನ್ನು ಆಸಕ್ತಿಯಿಂದ ವೀಕ್ಷಿಸುತ್ತ ಮುಂದೆ ನಡೆದರು.)*

ವಿಶ್ವಾಸ್ : ಸರ್, ಅಲ್ಲಿ ನೋಡಿ, ಆ ಶಿಲ್ಪದಲ್ಲಿ ಒಬ್ಬ ಹುಡುಗ ಹುಲಿಯ ಬಾಯಿಗೆ ತಿವಿಯುತ್ತಿದ್ದಾನಲ್ಲಾ?

ಶಿಕ್ಷಕ : ಅದು ಸಳನು ಹುಲಿಯೊಡನೆ ಹೋರಾಡಿದ ಘಟನೆಯ ಶಿಲ್ಪ.

ಸ್ವಾತಿ : ಅಬ್ಬಾ! ಇದು ನಿಜವಾಗಿಯೂ ನಡೆದದ್ದೇ? ಮೇಡಂ.

ಶಿಕ್ಷಕಿ : ಹೌದು. ಇದರ ಬಗ್ಗೆ ತಿಳಿಯಲು ನಿಮಗೆ ತುಂಬಾ ಕುತೂಹಲ ವಾಗುತ್ತದೆಯಲ್ಲವೇ? ನಾನಿದರ ಬಗ್ಗೆ ತಿಳಿಸುತ್ತೇನೆ.

ಶಿಕ್ಷಕ : ಬನ್ನಿ, ಎಲ್ಲರೂ ಅಲ್ಲಿ ನೆರಳಿನಲ್ಲಿ ಕುಳಿತುಕೊಳ್ಳುವಾ.

*(ಮಕ್ಕಳು ಸಂತೋಷದಿಂದ ಒಪ್ಪಿಗೆ ಸೂಚಿಸಿದರು. ಶಿಕ್ಷಕರು 'ಹೊಯ್ಸಳ ಲಾಂಛನ' ದ ಬಗ್ಗೆ ವಿವರಿಸಿದರು)*

ಶಿಕ್ಷಕ : ಮೂಡಿಗೆರೆ ತಾಲೂಕಿನ 'ಅಂಗಡಿ' ಎಂಬ ಹಳ್ಳಿಗೆ ಹೊಂದಿಕೊಂಡಂತೆ ಒಂದು ದೊಡ್ಡ ಅಡವಿ ಇತ್ತು, ಅಲ್ಲಿದ್ದ ವಾಸಂತಿ ದೇವಿಯ ಗುಡಿಯಲ್ಲಿ ಜೈನ ಗುರು ಒಬ್ಬರು ಮಕ್ಕಳಿಗೆ ಪಾಠ ಹೇಳಿಕೊಡುತ್ತಿದ್ದರು.

ವೇಣು : ಅಬ್ಬಾ! ಅಷ್ಟು ದೊಡ್ಡ ಕಾಡಿನಲ್ಲಿ ಮಕ್ಕಳಿಗೆ ಪಾಠ ಹೇಳಿಕೊಡುತ್ತಿದ್ದರೇ?

ಶಿಕ್ಷಕ : ಹೌದು. ಒಂದು ದಿನ ಗುರುಗಳು ಪಾಠ ಮಾಡುತ್ತಿರುವಾಗ ಒಂದು ಹೆಬ್ಬುಲಿಯು ಆರ್ಭಟಿಸುತ್ತಾ ಅಲ್ಲಿಗೆ ಬಂತು. ಗುಡಿಯೊಳಗಿದ್ದ ಶಿಷ್ಯರು ಹೌಹಾರಿದರು. ಹೆದರಿ ಹೊರಗೋಡಿದರು.

ಶಾಲಿನಿ : ಮತ್ತೆ....... ಗುರುಗಳು?

ಶಿಕ್ಷಕಿ : ಶಿಷ್ಯರಲ್ಲಿ ಒಬ್ಬನಾದ ಸಳನು ಗುರುಗಳ ರಕ್ಷಣೆಗೆ ನಿಂತನು. ಗುರುಗಳು ಅವನ ಕೈಗೆ ಒಂದು ಕಬ್ಬಿಣದ ಸಲಾಕೆಯನ್ನು ಕೊಟ್ಟು 'ಹೊಯ್ ಸಳ' 'ಹೊಯ್ ಸಳ' ಎಂದು ಕೂಗಿ ಹೇಳಿದರು. ಕಲಿಯೂ, ಬಲಶಾಲಿಯೂ ಆದ ಸಳನು ಸ್ವಲ್ಪವೂ ಹೆದರದೆ ಸಲಾಕೆಯಿಂದ ಹುಲಿಯನ್ನು ಮಣಿಸಿದನು. ನಂತರ ಆ ಸಲಾಕೆಯನ್ನು ಹುಲಿಯ ಬಾಯಲ್ಲಿ ತೂರಿಸಿ ಅದನ್ನು ಕೊಂದು ಹಾಕಿದನು.

ದರ್ಶನ್ : ಅಬ್ಬಾ! ಸಳನು ಎಷ್ಟು ಧೈರ್ಯಶಾಲಿ ಅಲ್ಲವೇ ಟೀಚರ್?

ಶಿಕ್ಷಕ : ಹೌದು, ಸಳನು ಹುಲಿಯನ್ನು ಮಣಿಸಿದ ಸುದ್ದಿ ಗ್ರಾಮದಲ್ಲೆಲ್ಲಾ ಹರಡಿತು. ಜನರು ಗುಂಪಾಗಿ ಬಂದು 'ಭಲೇ ಸಳ, 'ಒಳ್ಳೆಯ ಕೆಲಸ ಮಾಡಿದೆ' ಎಂದು ಹೊಗಳಿದರು.

**ಸ್ಫೂರ್ತಿ** : ಆಮೇಲೆ ಏನಾಯ್ತು ಗುರುಗಳೇ?

**ಶಿಕ್ಷಕಿ** : ಆಗ ಗುರುಗಳು "ಈ ವೀರನನ್ನು ನೀವು ನಿಮ್ಮ ದೊರೆಯನ್ನಾಗಿ ಮಾಡಿಕೊಳ್ಳಿ. ಇವನು ನಿಮ್ಮೆಲ್ಲರನ್ನೂ ಕಾಪಾಡುವನು" ಎಂದರು. ಜನರು ಸಂತೋಷದಿಂದ ಇಂದಿನಿಂದ "ಈತನೇ ನಮಗೆ ದೊರೆ" ಎಂದು ಹೇಳಿ ಜಯಕಾರ ಮಾಡಿದರು.

**ಸುಪ್ರೀತ** : ಮುಂದೆ.....?

**ಶಿಕ್ಷಕ** : ಮುಂದೆ ಸಳನ ದೊರೆತನದಲ್ಲಿ ರಾಜ್ಯ ಸ್ಥಾಪನೆಯಾಯಿತು. ಅವನು ಹುಲಿಯನ್ನು ಮಣಿಸಿದ ಘಟನೆಯೇ ಆ ವಂಶದ ಲಾಂಛನವಾಯಿತು ಹಾಗೂ ಗುರುಗಳು ಹೇಳಿದ 'ಹೊಯ್ಸಳ' ಎಂಬ ನುಡಿಯಿಂದಲೇ ಅವನ ವಂಶವು ಪ್ರಸಿದ್ಧವಾಯಿತು.

**ವರುಣ** : ಗುರುಗಳೇ, ಆ ಲಾಂಛನ ಇಲ್ಲಿ ಏಕೆ ಇದೆ?

**ಶಿಕ್ಷಕಿ** : ಏಕೆಂದರೆ ಈ ದೇವಾಲಯವು ಇವನ ವಂಶದವನೇ ಆದ ವಿಷ್ಣುವರ್ಧನನಿಂದ ನಿರ್ಮಾಣವಾಯಿತು. ಆದ್ದರಿಂದ ಆ ವಂಶದ ಲಾಂಛನವನ್ನು ಇಲ್ಲಿ ಕೆತ್ತಲಾಗಿದೆ. ಇವನಲ್ಲದೆ ಈ ವಂಶದ ಅನೇಕ ರಾಜರು ಕಲೆ-ಸಾಹಿತ್ಯಕ್ಕಾಗಿ ಗಣನೀಯ ಸೇವೆ ಸಲ್ಲಿಸಿದರು. ಹಲವು ಸುಂದರ ದೇವಾಲಯಗಳ ನಿರ್ಮಾಣಕ್ಕೆ ಕಾರಣರಾದರು. ಇವರಿಂದ ನಿರ್ಮಾಣಗೊಂಡ ಬೇಲೂರು, ಹಳೇಬೀಡು ಹಾಗೂ ಸೋಮನಾಥಪುರ ದೇವಾಲಯಗಳು ಪ್ರಸಿದ್ಧವಾದವು.

**ಶಿಕ್ಷಕ** : ಬನ್ನಿ ಮಕ್ಕಳೇ, ಈಗ ಎಲ್ಲರೂ ದೇವಾಲಯದ ಒಳಗೆ ಹೋಗೋಣ. ಇದರ ಬಗ್ಗೆ ಮತ್ತಷ್ಟು ವಿಚಾರಗಳನ್ನು ತಿಳಿಯೋಣ
(ಎಲ್ಲರೂ ದೇವಾಲಯದ ಒಳಗೆ ನಡೆದರು)



## ಓದಿ ತಿಳಿ

ಪ್ರಾಂಗಣ – ಅಂಗಣ ; ನಿರ್ಮಾಣ – ಸೃಷ್ಟಿ, ರಚನೆ ; ಅಪೂರ್ವ – ವಿಶೇಷ, ಹಿಂದಿಲ್ಲದ; ನಯನ – ಕಣ್ಣು ; ಮನೋಹರ – ಆಕರ್ಷಣೀಯ, ಬಹುಸುಂದರವಾದ, ಲಾಂಛನ – ಗುರುತು, ಮುದ್ರೆ, ಚಿಹ್ನೆ ; ಆರ್ಭಟಿಸು – ಗಟ್ಟಿಯಾಗಿ ಕೂಗು, ಅಬ್ಬರಿಸು ; ಹೌಹಾರು – ಬೆಚ್ಚಿಬೀಳು ; ದೊರೆ – ರಾಜ, ಅರಸ ; ಪ್ರಸಿದ್ಧ – ಕೀರ್ತಿ, ಖ್ಯಾತ ; ತೊಲೆ – ಮರದ ದಿಮ್ಮಿ ; ಹೊಯ್ – ಹೊಡೆ ; ಮಣಿಸು – ಸೋಲಿಸು.

## ಗಮನಿಸಿ ತಿಳಿ

ಮೋಹಕ – ಮನಸ್ಸನ್ನು ಸೆರೆಹಿಡಿಯುವ

ಮದನಿಕಾ ವಿಗ್ರಹಗಳು – ಶಿಲಾ ಕಂಬಗಳಲ್ಲಿ ಜೋಡಿಸಿರುವ ಸ್ತ್ರೀ ಶಿಲ್ಪಗಳು

ಚಿತ್ರ ಪಟ್ಟಿಕೆ – ಪಟ್ಟಿಕೆಯ ರೂಪದಲ್ಲಿ ಜೋಡಿಸಿರುವ ಶಿಲ್ಪಗಳು

## ಪಠ್ಯಾಧಾರಿತ ಅಭ್ಯಾಸ

### ಅ. ಒಂದೊಂದು ಪದ/ವಾಕ್ಯದಲ್ಲಿ ಉತ್ತರಿಸು.

೧. ಬೇಲೂರಿನಲ್ಲಿರುವ ದೇವಾಲಯ ಯಾವುದು?

________________________________

೨. 'ಅಂಗಡಿ' ಎಂಬ ಹಳ್ಳಿ ಎಲ್ಲಿದೆ?

________________________________

೩. ಹುಲಿಯ ಬಾಯಿಗೆ ಸಲಾಕೆಯಿಂದ ತಿವಿದ ಬಾಲಕ ಯಾರು?

________________________________

೪. ಹೊಯ್ಸಳ ಲಾಂಛನವು ಯಾವ ಘಟನೆಯನ್ನು ತಿಳಿಸುತ್ತದೆ?

________________________________

೫. ಸಳನಿಗೆ 'ಹೊಯ್ ಸಳ' ಎಂದು ಯಾರು ಹೇಳಿದರು?

________________________________

೬. ಚೆನ್ನ ಕೇಶವ ದೇವಾಲಯವನ್ನು ಯಾರು ಕಟ್ಟಿಸಿದರು?

________________________________

### ಆ. ಎರಡು ಮೂರು ವಾಕ್ಯಗಳಲ್ಲಿ ಉತ್ತರಿಸು.

೧. ಸಳನ ಮನೆತನಕ್ಕೆ ಹೊಯ್ಸಳ ಎಂಬ ಹೆಸರು ಹೇಗೆ ಬಂತು?

________________________________

________________________________

೨. ಜನರು ಸಳನನ್ನು ತಮ್ಮ ದೊರೆ ಎಂದು ಒಪ್ಪಲು ಕಾರಣವೇನು?

೩. ಹೊಯ್ಸಳರಿಂದ ನಿರ್ಮಾಣಗೊಂಡ ಪ್ರಸಿದ್ಧ ದೇವಾಲಯಗಳು ಯಾವುವು?

**ಇ. ಈ ಮಾತನ್ನು ಯಾರು ಯಾರಿಗೆ ಹೇಳಿದರು? ಬರೆ**

೧. "ಗುರುಗಳೇ, ಅಲ್ಲಿ ಕಾಣುತ್ತಿರುವ ಊರು ಯಾವುದು?"

೨. "ಈ ವೀರನನ್ನು ನೀವು ನಿಮ್ಮ ದೊರೆಯನ್ನಾಗಿ ಮಾಡಿಕೊಳ್ಳಿ"



೩. "ಭಲೇ ಸಳ ! ಒಳ್ಳೆಯ ಕೆಲಸ ಮಾಡಿದೆ"

**ಈ. ಕೊಟ್ಟಿರುವ ವಾಕ್ಯಗಳನ್ನು ಸರಿಪಡಿಸಿ ಬರೆ.**

೧. ಈ ದೇವಾಲಯವು ನಿರ್ಮಾಣವಾಗಿದೆ ನಕ್ಷತ್ರಾಕಾರದ ಜಗಲಿಯ ಮೇಲೆ

೨. ರಕ್ಷಣೆಗೆ ನಿಂತನು ಗುರುಗಳ ಸಳನು

೩. ಹುಲಿಯನ್ನು ಕೊಂದ ಸುದ್ದಿ ಸಳನು ಹರಡಿತು ಗ್ರಾಮದಲ್ಲೆಲ್ಲಾ

ಉ. ಈ ವಾಕ್ಯಗಳು ಸರಿ ಇದ್ದರೆ (✓) ಎಂದೂ, ತಪ್ಪಿದ್ದರೆ ತಪ್ಪು (x) ಎಂದೂ ಗುರುತಿಸಿ ಬರೆ.

೧. ಸಳನು ಹುಲಿಯನ್ನು ಕಂಡು ಹೆದರಿದನು ( )

೨. ವಾಸಂತಿ ದೇವಿಯ ಗುಡಿಯಲ್ಲಿ ಜೈನ ಗುರು ಒಬ್ಬರು ಮಕ್ಕಳಿಗೆ ಪಾಠ ಹೇಳಿಕೊಡುತ್ತಿದ್ದರು. ( )

೩. ಬೇಲೂರಿನಲ್ಲಿರುವುದು ಚೆನ್ನಕೇಶವ ದೇವಾಲಯ. ( )

೪. ಗುರುಗಳು ಹುಲಿಯನ್ನು ಕೊಂದರು ( )

## ಸಾಮಾರ್ಥ್ಯಾಧಾರಿತ ಅಭ್ಯಾಸ

ಪಠ್ಯವನ್ನು ಓದಿ ಸಂಭಾಷಣೆಗಳನ್ನು ಅರ್ಥಮಾಡಿಕೊಂಡು ಪ್ರಶ್ನೆಗಳಿಗೆ ಉತ್ತರಿಸು.

೧. ಬಸ್ಸಿನಲ್ಲಿ ನಡೆದ ಸಂಭಾಷಣೆಯಲ್ಲಿ ಭಾಗವಹಿಸಿದವರು ಯಾರು ಯಾರು?

೨. ದೇವಾಲಯದ ಪ್ರಾಂಗಣದಲ್ಲಿ ಯಾವ ವಿಷಯದ ಬಗ್ಗೆ ಮಾತುಕತೆ ನಡೆಯಿತು?

೩. ಹೊಯ್ಸಳ ಲಾಂಛನದ ಬಗ್ಗೆ ವಿವರಣೆ ನೀಡಿದವರು ಯಾರು?



## ಭಾಷಾ ಚಟುವಟಿಕೆ

ಅ. ಮಾದರಿಯಂತೆ ಕೂಡಿಸಿ ಬರೆ.

ಮಾದರಿ : ಹಣ + ವಂತ = ಹಣವಂತ

ಧೈರ್ಯ + ವಂತ = ______

ಬುದ್ಧಿ + ವಂತ = ______

ಗುಣ + ವಂತ = ______

ಶೀಲ + ವಂತ = ______

ಛಲ + ವಂತ = ______

ಅ. ಕೊಟ್ಟಿರುವ ವಾಕ್ಯಗಳಿಗೆ ಸೂಕ್ತ ಲೇಖನ ಚಿಹ್ನೆಗಳನ್ನು ಹಾಕು.

೧. ಆಹಾ ಈ ಜಲಪಾತವು ಎಷ್ಟು ಅದ್ಭುತವಾಗಿದೆ.

೨. ಗುರುಗಳೇ ರಸ್ತೆ ಅಪಘಾತಗಳನ್ನು ತಪ್ಪಿಸಲು ಸಾಧ್ಯವಿಲ್ಲವೇ.

೩. ಮಾವಿನ ತೋಪಿಗೆ ರಂಗ ರವಿ ರಾಜು ಹಾಗೂ ರಾಮ ಹೋದರು.

ಪಾಠ ೧೪

# ಕಪ್ಪೆಯ ಹಾಡು (ಪದ್ಯ)

**ಸಾಮರ್ಥ್ಯ :** ಪರಿಚಿತ ವಸ್ತುಗಳ ಬಗ್ಗೆ ವಿವರಿಸುವುದು.

**ಓದುವ ಮುನ್ನ :** ನೀನು ಪೆನ್ನು, ಬೆಂಚು, ಪುಸ್ತಕ, ಮಿಠಾಯಿ ಇತ್ಯಾದಿ ವಸ್ತುಗಳ ಬಗ್ಗೆ ತಿಳಿದಿರುವೆ. ಅವುಗಳಲ್ಲಿ ನಿನಗಿಷ್ಟವಾದ ಯಾವುದಾದರು ಒಂದು ವಸ್ತುವಿನ ಬಗ್ಗೆ ನಿನ್ನ ಮಾತುಗಳಲ್ಲಿ ಹೇಳು.



ಮಣ್ಣ ಬಣ್ಣ ನೀಲಿ ಕಣ್ಣ
ಸಣ್ಣ ಜೀವಿ ನಾನು
ಸಂಜೆ ಹೊತ್ತು ಕೆರೆಯ ಸುತ್ತ
ನೋಡಿರುವೆಯಾ ನೀನು?

ಬೇಸಿಗೆಯಲಿ ನೆಲದ ಒಳಗೆ
ವಾಸವಿರುವೆನು
ಸುಡುವ ಬಿಸಿಲ ಕಾಲದಲ್ಲಿ
ಅಡಗಿ ಬಿಡುವೆನು

ಬಿತ್ತಿ ಬೆಳೆವ ಹಳ್ಳಿ ರೈತ
ನನ್ನ ಗೆಳೆಯನು
ನನ್ನ ಕೊರಳ ಹಾಡಿಗಾಗಿ
ಕಾಯುತಿರುವನು

ತುಂಟ ಹುಡುಗ ನನ್ನ ಕಂಡು
ಕಲ್ಲು ಎಸೆವನು
ಅವನು ಬರಲು ಮಾರು ದೂರ
ಜಿಗಿದು ಬಿಡುವೆನು

ಅದೋ ನೋಡು ಕೇರೆರಾಯ
ಬರುತಲಿರುವನು
ಆದ್ದರಿಂದ ಈಗ ಹೋಗಿ
ಮತ್ತೆ ಬರುವೆನು

–ಗೋಪಾಲಕೃಷ್ಣ ಶಗ್ರಿತ್ತಾಯ

## ಓದಿ ತಿಳಿ

ಹೊತ್ತು–ಸಮಯ; ವಾಸಿಸು–ಜೀವಿಸು; ಎಸೆ–ಬಿಸಾಡು; ಸಣ್ಣ–ಚಿಕ್ಕ; ಅಡಗು–ಬಚ್ಚಿಟ್ಟುಕೋ; ಕೊರಳು–ಕುತ್ತಿಗೆ; ಜಿಗಿ–ಹಾರು; ರಾಯ–ರಾಜ

## ಗಮನಿಸಿ ತಿಳಿ

ಮಾರು – ಎರಡು ಕೈಗಳನ್ನು ಅಡ್ಡಕ್ಕೆ ಚಾಚಿದಷ್ಟು ಅಳತೆ

ಕೇರೆ – ಒಂದು ಜಾತಿಯ ವಿಷವಿಲ್ಲದ ಹಾವು

## ಪದ್ಯಾಧಾರಿತ ಅಭ್ಯಾಸ

### ಅ) ಈ ಕೆಳಗಿನ ಪ್ರಶ್ನೆಗಳಿಗೆ ಉತ್ತರಿಸು.

೧. ಕಪ್ಪೆಯ ಬಣ್ಣ ಯಾವುದು?

________________________________

೨. ಕಪ್ಪೆಯ ಕಣ್ಣು ಹೇಗಿದೆ?

________________________________

೩. ಕಪ್ಪೆ ಯಾವ ಸಮಯದಲ್ಲಿ ಕಾಣ ಸಿಗುತ್ತದೆ?

________________________________

೪. ಬೇಸಿಗೆಯಲ್ಲಿ ಕಪ್ಪೆ ಎಲ್ಲಿ ವಾಸ ಮಾಡುತ್ತದೆ?

________________________________

೫. ಕಪ್ಪೆಯ ಗೆಳೆಯ ಯಾರು ?

________________________________

೬. ರೈತ ಯಾವುದಕ್ಕಾಗಿ ಕಾಯುತ್ತಿರುವನು ?

________________________________

### ಆ) ಈ ಪ್ರಶ್ನೆಗಳಿಗೆ ವಿವರವಾಗಿ ಉತ್ತರಿಸು.

೧. ಕಪ್ಪೆ ಹೇಗಿರುತ್ತದೆ ಎಂದು ಕವಿ ಹೇಳಿದ್ದಾನೆ?

________________________________

________________________________

೨. ತುಂಟ ಹುಡುಗ ಬಂದಾಗ ಕಪ್ಪೆ ಏಕೆ ದೂರ ಜಿಗಿಯುತ್ತದೆ?

______________________________

______________________________

**ಇ) ಬಿಟ್ಟ ಪದ ತುಂಬು.**

೧. ಮಣ್ಣ ಬಣ್ಣ ____________ ಕಣ್ಣ

೨. ಬಿತ್ತಿ ಬೆಳೆವ ____________ ರೈತ

೩. ಅವನು ಬರಲು ____________ ದೂರ

೪. ಅದೋ ನೋಡು ____________ ರಾಯ

೫. ಸಂಜೆ ಹೊತ್ತು ____________ ಸುತ್ತ

## ಸಾಮರ್ಥ್ಯಾಧಾರಿತ ಅಭ್ಯಾಸ

**ಅ) ಇಲ್ಲಿ ನೀಡಿರುವ ಶಬ್ದಗಳಿಗೆ ಸಂಬಂಧಿಸಿದ ಇತರ ಶಬ್ದಗಳನ್ನು ಮಾದರಿಯಂತೆ ಬರೆ.**

**ಮಾದರಿ : ಶಾಲೆ–ಶಿಕ್ಷಕ–ಮಕ್ಕಳು–ಪುಸ್ತಕ–ಪೆನ್ನು**

೧. ಮನೆ : ____________ – ____________ – ____________

೨. ಕಾಡು : ____________ – ____________ – ____________

೩. ಕಾರು : ____________ – ____________ – ____________

೪. ಅಂಗಡಿ: ____________ – ____________ – ____________

**ಆ) ಇಲ್ಲಿ ನೀಡಿರುವ ವಸ್ತುಗಳ ಬಗ್ಗೆ ಎರಡೆರಡು ವಾಕ್ಯಗಳನ್ನು ಬರೆ.**

೧. ಚೀಲ : ______________________________

______________________________

೨. ಹೂ : ______________________________

______________________________

೩. ಶಾಲೆ : ______________________

______________________

ಇ) ನೀಡಿರುವ ಚಿತ್ರವನ್ನು ನೋಡಿ ಎರಡು ವಾಕ್ಯಗಳನ್ನು ರಚಿಸು.



______________________

______________________

______________________

## ಭಾಷಾಭ್ಯಾಸ

ಅ) ಈ ವಾಕ್ಯದಲ್ಲಿ ಬರುವ ಲಿಂಗ ಸೂಚಕ ಪದಗಳನ್ನು ಗಮನಿಸಿ ಬಿಟ್ಟಿರುವ ಸ್ಥಳವನ್ನು ತುಂಬು.

ಮಾದರಿ; ಹುಡುಗ. ಕಲ್ಲು ಎಸೆವನು.

ಹುಡುಗಿ ಕಲ್ಲು ಎಸೆವಳು.

೧. ಗೆಳೆಯ ಆಡಲು ಕಾಯುತ್ತಿರುವನು.

______________ ಆಡಲು ಕಾಯುತ್ತಿರುವಳು.

೨. ತುಂಟ ಕಲ್ಲು ಎಸೆವನು.

______________ ಕಲ್ಲು ಎಸೆವಳು.

೩. ಅವನು ಊರಿಗೆ ಬಂದನು.

______________ ಊರಿಗೆ ಬಂದಳು.

೪. ಅಪ್ಪ ಕೆಲಸಕ್ಕೆ ಹೋದನು.

______________ ಕೆಲಸಕ್ಕೆ ಹೋದಳು.

## ಭಾಷಾ ಚಟುವಟಿಕೆ

### ಅ) ಪ್ರಾಸ ಪದಗಳನ್ನು ಹೊಂದಿಸಿ ಬರೆ.

| ಅ | ಆ | |
|---|---|---|
| ಕಣ್ಣ | ತರಲು | ______________ |
| ಹೊತ್ತು | ನೆರೆಯ | ______________ |
| ಕೆರೆಯ | ಬಿಡುವ | ______________ |
| ಸುಡುವ | ಸುತ್ತು | ______________ |
| ಬರಲು | ಬಣ್ಣ | ______________ |

### ಆ) ಈ ಶಬ್ದಗಳಿಗೆ ಮಾದರಿಯಂತೆ ಪ್ರಾಸಪದ ಬರೆಯಿರಿ.

ಮಾದರಿ; ಬಾರಿ–ಹಾರಿ, ಸೇರಿ, ಮಾರಿ.

ನಾನು – ____________ ____________ ____________

ದೂರ – ____________ ____________ ____________

### ಇ) ಬಿಡಿಸಿ ಬರೆದಿರುವುದನ್ನು ಜೋಡಿಸಿ ಬರೆ.

ಮಾದರಿ; ಕಾಯುತ + ಇರುವೆನು = ಕಾಯುತಿರುವೆನು

ಬರುತ + ಇರುವೆನು = ____________

ನೋಡುತ + ಇರುವೆನು = ____________

ವಾಸಿಸುತ + ಇರುವೆನು = ____________

**ಚಟುವಟಿಕೆ**

ಬೇರೆ ಬೇರೆ ರೀತಿಯ ಜಲಚರಗಳ ಚಿತ್ರಗಳನ್ನು ಸಂಗ್ರಹಿಸು.



ಪಾಠ ೧೫

# ಆಡೋಣ ಬಾ

**ಸಾಮರ್ಥ್ಯ :** ಆಟಗಳನ್ನು ಆಡುವ ಬಗ್ಗೆ ಸರಳ ಚಟುವಟಿಕೆಗಳನ್ನು ಕಾರ್ಯರೂಪಕ್ಕೆ ತರುವ ಬಗ್ಗೆ ಮೌಖಿಕ ಸೂಚನೆಗಳನ್ನು ಅರ್ಥ ಮಾಡಿಕೊಳ್ಳುವುದು.

**ಓದಿಗೆ ಮುನ್ನ :** ಆಟಗಳನ್ನು ಕಲಿಯಲು, ಗೊಂದಲವಿಲ್ಲದೆ ಆಡಲು ನಿಯಮಗಳನ್ನು ಅರಿಯಬೇಕು. ಈ ಆಟವನ್ನು ಗಮನಿಸು. ನಿಯಮಗಳನ್ನು ತಿಳಿದು ಸೂಚನೆಗಳನ್ನು ಅನುಸರಿಸಿ ಗೆಳೆಯರೊಡನೆ ಆಡು.

ಕಿಶೋರ ಜೋರಾಗಿ ಅಳುವ ಸದ್ದಿಗೆ ಅವನ ಅಜ್ಜ ಹೊರಗೆ ಬಂದರು. ಅಳಲು ಕಾರಣ ಏನೆಂದು ಕೇಳಿದಾಗ, ಪ್ರಮೀಳಕ್ಕ ತನ್ನನ್ನು ಆಟಕ್ಕೆ ಸೇರಿಸಿ ಕೊಳ್ಳುತ್ತಿಲ್ಲ ಎಂದು ದೂರಿದನು.

**ಅಜ್ಜ :** ಪ್ರಮೀಳ, ತಮ್ಮನನ್ನು ಕರೆದು ಕೊಂಡು ಆಡಬಾರದೇಕೆ?

**ಪ್ರಮೀಳ :** ಅಜ್ಜಾ, ನಾನು ಕುಂಟೆಬಿಲ್ಲೆ ಆಡೋದು. ಆಡೋಕೆ ಪದ್ಮ ಬರುತ್ತಾಳೆ. ಕಿಶೋರನಿಗೆ ಕುಂಟೆಬಿಲ್ಲೆ ಆಡಲು ಬರುವುದಿಲ್ಲ. ನಾನು ಹೇಗೆ ಅವನನ್ನು ಆಟಕ್ಕೆ ಸೇರಿಸಿಕೊಳ್ಳಲಿ?

**ಅಜ್ಜ :** ಕಿಶೋರನ ಜೊತೆ ಆಡುವವರು ಯಾರೂ ಇಲ್ಲ. ಅವನಿಗೆ ನಾನು ಆಟ ಹೇಳಿ ಕೊಡುವೆ.

**ಕಿಶೋರ :** (ಕುಣಿದು ಕುಪ್ಪಳಿಸಿ) ಓ.. ಅಜ್ಜ ಆಟ ಹೇಳಿ ಕೊಡ್ತಾರೆ! ಕುಂಟೆಬಿಲ್ಲೆ ಆಟ ಅಂದ್ರೆ ನನಗೆ ತುಂಬಾ ಇಷ್ಟ! ಅಜ್ಜಾ, ನೋಡು ಆಟಕ್ಕೆ ಬಿಲ್ಲೆ ಸಿದ್ಧ ಮಾಡ್ಕೊಂಡಿದ್ದೀನಿ.

**ಪ್ರಮೀಳ :** ಕಿಶೋರ, ಬಿಲ್ಲೆ ನಯವಾಗಿ ದುಂಡಾಗಿರಬೇಕು. ಇಲ್ಲವಾದರೆ ಕಾಲಿನಿಂದ ತಳ್ಳುವಾಗ ಗಾಯವಾಗುತ್ತೆ. ಆಟ ಆಡುವಾಗ ಅವಸರ ಮಾಡಬಾರದು.

**ಅಜ್ಜ :** ಕಿಶೋರ, ಅಕ್ಕ ಹೇಳಿದ್ದು ಸರಿ. ಅವಳ ಸೂಚನೆಯನ್ನು ಪಾಲಿಸಬೇಕು, ಆಯ್ತಾ?

**ಕಿಶೋರ :** ಆಯ್ತು. ಆದರೆ ಸೂಚನೆ ಅಂದ್ರೆ ಏನು?

**ಅಜ್ಜ :** ಸೂಚನೆ ಅಂದ್ರೆ ಏನನ್ನು ಮಾಡಬೇಕು, ಹೇಗೆ ಮಾಡಬೇಕು, ಏನನ್ನು ಮಾಡಬಾರದು ಅನ್ನುವ ಹೇಳಿಕೆಗಳು. ಈಗ ಹೇಳು, ಸೂಚನೆಗಳನ್ನು ಸರಿಯಾಗಿ ಪಾಲಿಸುತ್ತೀಯಲ್ಲವೇ?

**ಕಿಶೋರ :** ಆಯ್ತು ಅಜ್ಜ. ಈಗ ಕುಂಟೆಬಿಲ್ಲೆ ಅಂಕಣ ಬರೆಯೋಣವೇ?

**ಅಜ್ಜ :** ಓಹೋ, ಕಿಶೋರನಿಗೆ ಎಷ್ಟು ಆತುರ! ಆಗಲಿ. ಗಮನವಿಟ್ಟು ಕೇಳು. ಮೊದಲು ನೆಲದ ಮೇಲೆ ಎಡಬಲಕ್ಕೆ ಹೊಂದಿಕೊಂಡಂತೆ ತಲಾ ನಾಲ್ಕು ಚೌಕಗಳು ಬರುವಂತೆ ಎಂಟು ಚೌಕಗಳನ್ನು ಬರೆ. ಎರಡೂ ಸಾಲಿನ ಕೊನೆಯ ಎರಡು ಚೌಕಗಳು ವಿಶ್ರಾಂತಿಗಾಗಿ ಇರುವ ಚೌಕಗಳು. ಇವುಗಳನ್ನು ಮೂಲೆಯಿಂದ ಮೂಲೆಗೆ ಬರೆದು ಗುರುತಿಸು.

(ಅಜ್ಜ ತಿಳಿಸಿದಂತೆ ಕಿಶೋರ ಖುಷಿಯಿಂದ ಅಂಕಣ ಬರೆಯಲು ತೊಡಗಿದ. ಪ್ರಮೀಳ ಅವನಿಗೆ ಸಹಾಯ ಮಾಡಿದಳು)



**ಪ್ರಮೀಳ :** ಅಜ್ಜಾ, ನೀನೂ ಈ ಆಟ ಆಡಿರುವೆಯಾ?

**ಅಜ್ಜ :** ಓಹೋ, ನಾನೂ ಆಡಿದ್ದೆ. ನಮ್ಮ ಕಾಲದಲ್ಲಿ ಇನ್ನೂ ಎಷ್ಟೋ ಬೇರೆ ಬೇರೆ ಆಟಗಳು ಇದ್ದವು. ಕಲ್ಲೋ ಮಣ್ಣೋ, ಚಿಣ್ಣಿದಾಂಡು, ಓಟದ ಆಟ, ಮರಕೋತಿ ಆಟ ಮುಂತಾದ ಹೊರಾಂಗಣ ಆಟಗಳೂ, ಅಣ್ಣೆಕಲ್ಲು, ಚೌಕಾಬಾರಾ, ಉದ್ದಿನ ಮೂಟೆ ಮುಂತಾದ ಒಳಾಂಗಣ ಆಟಗಳೂ ಇದ್ದವು. ಸಧ್ಯಕ್ಕೆ ಈಗ ಈ ಆಟ ಆಡೋಣ.

**ಕಿಶೋರ :** ಆಯ್ತು. ಇನ್ನೊಮ್ಮೆ ಆ ಆಟಗಳನ್ನೂ ಹೇಳಿಕೊಡು. ಈಗ ಕುಂಟೆಬಿಲ್ಲೆ ಅಂಕಣ ಬರೆದಾಯ್ತು, ಮುಂದೇನು ಮಾಡುವುದು?

ಪ್ರಮೀಳ : ಕಿಶೋರ, ಮೊದಲು ಆಟದ ನಿಯಮ, ಆಟವಾಡುವ ವಿಧಾನ ತಿಳಿದುಕೋ.

ಅಜ್ಜ : ಚೌಕದೊಳಗೆ ಎಸೆಯುವ ನಿನ್ನ ಬಿಲ್ಲೆ ಅಂಕಣದೊಳಗಿನ ಯಾವುದೇ ಚೌಕದ ಗೆರೆ ಮೇಲೆ ಬಿದ್ದರೂ ನೀನು ಔಟ್ ಆದಂತೆ. ಅಂದರೆ ಆಗ ಇನ್ನೊಬ್ಬ ಆಟಗಾರರ ಸರದಿ. ಅದೇ ರೀತಿ ಎಲ್ಲಾ ಚೌಕಗಳಿಗೂ ಬಿಲ್ಲೆಯನ್ನು ತಳ್ಳುತ್ತಾ ಸಾಗುವಾಗಲೂ ಬಿಲ್ಲೆ ಗೆರೆಯ ಮೇಲೆ ನಿಲ್ಲಬಾರದು.

ಪ್ರಮೀಳ : ಮೊದಲ ಮೂರು ಚೌಕಗಳನ್ನು ಬಿಲ್ಲೆ ತಳ್ಳುತ್ತಾ ಸಾಗಿ, ಮೂರನೆಯ ಚೌಕದಿಂದ ಬಿಲ್ಲೆಯನ್ನು ಪಕ್ಕದ ಚೌಕಕ್ಕೆ ತಳ್ಳಿ, ಘಟ್ಟದ ಮನೆಗಳಲ್ಲಿ ಕಾಲು ಬಿಟ್ಟು ವಿಶ್ರಾಂತಿ ತೆಗೆದುಕೊಳ್ಳಬೇಕು. ಪಕ್ಕದ ಘಟ್ಟದ ಚೌಕದಿಂದ ಕುಂಟುತ್ತಾ ಬಿಲ್ಲೆಯನ್ನು ಹಿಂದಿನ ರೀತಿಯಲ್ಲಿ ತಳ್ಳುತ್ತಾ ಹೋಗಬೇಕು.

ಅಜ್ಜ : ಹೀಗೆ ಕುಂಟುವಾಗ ದೇಹದ ನಿಯಂತ್ರಣ ತಪ್ಪಿ ಮಡಿಸಿದ ಕಾಲನ್ನು ನೆಲಕ್ಕೆ ಊರಿದರೂ, ಕುಂಟುತ್ತಾ ಗೆರೆಯನ್ನು ತುಳಿದರೂ ಔಟ್ ಆದಂತೆ.

ಪ್ರಮೀಳ : ಕೊನೆಯ ಚೌಕಕ್ಕೆ ಬಂದ ಮೇಲೆ, ಅಲ್ಲಿಂದ ಬಿಲ್ಲೆಯನ್ನು ಅಂಕಣದಿಂದ ಹೊರಗೆ ತಳ್ಳಬೇಕು. ಅನಂತರ ಕೊನೆಯ ಚೌಕದಿಂದ ಹಾರಿ ಆ ಬಿಲ್ಲೆಯನ್ನು ತುಳಿಯಬೇಕು. ಅಲ್ಲಿಗೆ ಒಂದು ಸುತ್ತು ಮುಗಿದಂತೆ.

ಅಜ್ಜ : ಎಚ್ಚರವಿರಲಿ, ಹಾಗೆ ಕೊನೆಯ ಚೌಕದಿಂದ ಬಿಲ್ಲೆಯನ್ನು ತಳ್ಳಿದ ಮೇಲೆ ಅದನ್ನು ಹಾರಿ ತುಳಿಯದಿದ್ದರೆ ನೀನು ಔಟ್ ಆದಂತೆ. ಹಾಗಾಗಿ ಬಿಲ್ಲೆಯನ್ನು ತಳ್ಳುವಾಗ ಸ್ವಲ್ಪ ಹತ್ತಿರದಲ್ಲೇ ತಳ್ಳಿಕೊಂಡರೆ ಹಾರಿ ತುಳಿಯಲು ಸುಲಭ.

ಕಿಶೋರ : ಎಷ್ಟು ದೂರ ತಳ್ಳಿದರೂ, ನಾನು ಹಾರಿ ತುಳಿಯುವೆ! ಜಿಗಿಯುವುದೆಂದರೆ ನನಗೆ ತುಂಬಾ ಇಷ್ಟ. ಸರಿ, ಈಗ ನನಗೆ ಆಟದ ವಿಧಾನ, ನಿಯಮ ತಿಳಿಯಿತು. ಈಗ ಆಟ ಆಡಲೇ ಅಜ್ಜ?

ಅಜ್ಜ : ಸರಿ. ಮೊದಲು ಅಂಕಣದ ಮುಂದೆ ನಿಂತುಕೋ. ಬಿಲ್ಲೆಯನ್ನು ಬಲಭಾಗದ ಮೊದಲನೆಯ ಚೌಕಕ್ಕೆ ಎಸೆದು ಸೂಚನೆಯಂತೆ ಆಟ ಮುಂದುವರೆಸು.

(ಅಜ್ಜನ ಸೂಚನೆಯಂತೆ ಕಿಶೋರ ಬಿಲ್ಲೆಯನ್ನು ಮೊದಲನೆ ಮನೆಗೆ ಎಸೆಯುವನು. ಕುಂಟುತ್ತಾ ಕಾಲಿನಿಂದ ಬಿಲ್ಲೆಯನ್ನು ಚೌಕದಿಂದ ಚೌಕಕ್ಕೆ ದೂಡುತ್ತಾ ಮೂರನೆಯ ಚೌಕದಿಂದ ಎಡಪಕ್ಕದ ನಾಲ್ಕನೆಯ ಚೌಕಕ್ಕೆ ದೂಡಿ, ವಿಶ್ರಾಂತಿಯ ಘಟ್ಟಗಳಲ್ಲಿ

ಕಾಲೂರಿ ವಿಶ್ರಾಂತಿ ಪಡೆಯುವನು. ಮತ್ತೆ ಕುಂಟುತ್ತಾ ನಾಲ್ಕನೆಯ ಚೌಕದಿಂದ ಬಿಲ್ಲೆಯನ್ನು ದೂಡುತ್ತಾ ಐದು, ಆರನೆಯ ಚೌಕಕ್ಕೆ ಬಂದು ಅಲ್ಲಿಂದ ಹೊರಗೆ ದೂಡಿ, ಜಿಗಿದು ಬಿಲ್ಲೆಯನ್ನು ತುಳಿಯುವನು)

**ಅಜ್ಜ** : ಭೇಷ್, ಕಿಶೋರ. ತುಂಬಾ ಚೆನ್ನಾಗಿ ಆಡಿದ್ದೀಯ ! ಮೊದಲನೆಯ ಸುತ್ತು ಇಲ್ಲಿಗೆ ಮುಗಿಯಿತು.

**ಕಿಶೋರ** : ಅಬ್ಬಾ! ಅಂತೂ ಒಂದು ಸುತ್ತು ಮುಗೀತು. ಎಷ್ಟು ಖುಷಿ ಆಯ್ತು. ಜೊತೆಗೆ ಸುಸ್ತೂ ಆಯ್ತು!

**ಅಜ್ಜ** : ನೋಡಿದೆಯಾ? ದೇಹಕ್ಕೆ ವ್ಯಾಯಾಮ, ಮನಸ್ಸಿಗೆ ರಂಜನೆ ಪಡೆಯುವುದೇ ಈ ಆಟದ ಮುಖ್ಯ ಉದ್ದೇಶ.

**ಕಿಶೋರ** : ಮುಂದೆ ಹೇಗೆ ಆಡುವುದು?

**ಅಜ್ಜ** : ಹೀಗೆಯೇ ಎರಡನೆಯ ಚೌಕದಿಂದ ಆರಂಭಿಸಿ ಆಟವನ್ನು ಆರನೆಯ ಅಂಕಣದವರೆಗೂ ಮುಂದುವರಿಸಬೇಕು. ಮಧ್ಯೆ, ಸೂಚನೆ ತಪ್ಪಿದರೆ ಔಟಾದಂತೆ. ಆಗ ಇನ್ನೊಬ್ಬರು ತಮ್ಮ ಆಟವನ್ನು ಆರಂಭಿಸುತ್ತಾರೆ. ಹೀಗೇ ಸರದಿಯ ಮೇಲೆ ಆಡಿ, ಯಾರು ಮೊದಲಿಗೆ ಆಟವನ್ನು ಮುಗಿಸುತ್ತಾರೋ, ಅವರು ಗೆದ್ದಂತೆ. ಈ ಆಟವನ್ನು ಬೇರೆ ಬೇರೆ ಕಡೆಗಳಲ್ಲಿ ಇನ್ನೂ ವಿಭಿನ್ನ ರೀತಿಯಲ್ಲಿ ಆಡುತ್ತಾರೆ. ಇಂದಿಗೆ ಇಷ್ಟು ಸಾಕು. ಈಗ ಅಕ್ಕಳ ಗೆಳತಿ ಪದ್ಮ ಬಂದಿದ್ದಾಳೆ. ಅವರಿಬ್ಬರೂ ಆಡಲಿ, ನಾವು ನೋಡೋಣ, ಅಲ್ವೇ?

**ಕಿಶೋರ** : ಆಗಲಿ ಅಜ್ಜ.

*(ಪ್ರಮೀಳ, ಪದ್ಮ ಕುಂಟೆಬಿಲ್ಲೆ ಆಡತೊಡಗಿದರು. ಕಿಶೋರ ಖುಷಿಯಿಂದ ಆಟವನ್ನು ನೋಡತೊಡಗಿದ)*



## ಓದಿ–ತಿಳಿ

ವೈಖರಿ–ರೀತಿ, ಶೈಲಿ; ಆತುರ–ಅವಸರ; ಸಿದ್ಧ–ತಯಾರಾದ; ನಯ–ನುಣುಪು; ತಳ್ಳು–ದೂಡು, ನೂಕು; ಸುಸ್ತು–ದಣಿವು

## ಗಮನಿಸಿ–ತಿಳಿ

ಹೊರಾಂಗಣ ಆಟಗಳು – ಮೈದಾನದಲ್ಲಿ ಆಡುವ ಆಟಗಳು

ಒಳಾಂಗಣ ಆಟಗಳು – ಮನೆಯೊಳಗೆ ಕುಳಿತು ಆಡುವ ಆಟಗಳು

ಕುಂಟೆಬಿಲ್ಲೆ – ಒಂದು ಜನಪದ ಆಟ. ಕುಂಟೋಬಿಲ್ಲೆ, ಕುಂಟು ಬಿಲ್ಲೆ ಎಂದೂ ಕರೆಯುವರು.

ಬಿಲ್ಲೆ – ಕುಂಟೆಬಿಲ್ಲೆ ಆಟಕ್ಕೆ ಬಳಸುವ ದುಡಾಗಿರುವ ವಸ್ತು, ಸಾಮಾನ್ಯವಾಗಿ ಹೆಂಚಿನ ಚೂರು, ತೆಳುವಾದ ಕಲ್ಲಿನ ತುಂಡು ಅಥವಾ ಮರದ ಬೀಜ.

## ಪದ್ಯಾಧಾರಿತ ಅಭ್ಯಾಸ

### ಅ. ಈ ಪ್ರಶ್ನೆಗಳಿಗೆ ಒಂದೊಂದು ವಾಕ್ಯಗಳಲ್ಲಿ ಉತ್ತರಿಸು.

೧. ಕಿಶೋರ ಏಕೆ ಅಳುತ್ತಿದ್ದ?

______________________________

೨. ಕಿಶೋರ ಅಳುವ ಸದ್ದಿಗೆ ಯಾರು ಹೊರಗೆ ಬಂದರು?

______________________________

೩. ಪ್ರಮೀಳ ಯಾವ ಆಟವನ್ನು ಆಡಲು ತಯಾರಾಗಿದ್ದಳು?

______________________________

೪. ಬಿಲ್ಲೆ ಹೇಗಿರಬೇಕು?

______________________________

೫. ಅಂಕಣದಲ್ಲಿ ವಿಶ್ರಾಂತಿಗಾಗಿ ಇರುವ ಎರಡು ಚೌಕಗಳಿಗೆ ಏನೆನ್ನುತ್ತಾರೆ?

______________________________

### ಆ. ಈ ಪ್ರಶ್ನೆಗಳಿಗೆ ಎರಡು–ಮೂರು ವಾಕ್ಯಗಳಲ್ಲಿ ಉತ್ತರಿಸು.

೧. ಅಜ್ಜ ಆಡಿದ್ದ ಆಟಗಳು ಯಾವುವು?

______________________________

______________________________

೨. ಬಿಲ್ಲೆ ಎಸೆಯುವ ಬಗ್ಗೆ ಅಜ್ಜ ಏನೆಂದು ಹೇಳಿದರು?

______________________________________________

______________________________________________

೩. ಮೊದಲ ಮೂರು ಚೌಕಗಳನ್ನು ಬಿಲ್ಲೆ ತಳ್ಳುತ್ತಾ ಸಾಗಿದ ನಂತರ ಏನು ಮಾಡಬೇಕು?

______________________________________________

______________________________________________

೪. ಕೊನೆಯ ಚೌಕಕ್ಕೆ ಬಂದ ಮೇಲೆ ಏನು ಮಾಡಬೇಕೆಂದು ಪ್ರಮೀಳ ಹೇಳಿದಳು?

______________________________________________

______________________________________________

೫. ಕುಂಟೇಬಿಲ್ಲೆ ಆಟದ ಉದ್ದೇಶಗಳು ಯಾವುವು?

______________________________________________

______________________________________________



ಇ. **ಕೊಟ್ಟಿರುವ ಆಟಗಳನ್ನು ಒಳಾಂಗಣ ಹಾಗೂ ಹೊರಾಂಗಣ ಆಟಗಳಾಗಿ ವರ್ಗೀಕರಿಸಿ ಬರೆ.**

ಉದ್ದಿನ ಮೂಟೆ, ಚಿಣ್ಣಿದಾಂಡು, ಅಣ್ಣೆಕಲ್ಲು, ಚೌಕಾಬಾರಾ, ಕಲ್ಲೋಮಣ್ಣೋ, ಕಣ್ಣುಮುಚ್ಚಾಲೆ

| ಒಳಾಂಗಣ ಆಟಗಳು | ಹೊರಾಂಗಣ ಆಟಗಳು |
| --- | --- |
| | |

ಈ. ಕುಂಟೆಬಿಲ್ಲೆ ಆಡುವ ವಿಧಾನವನ್ನು ಅನುಕ್ರಮವಾಗಿ ಬರೆ.

* ಕೊನೆಯ ಚೌಕದಿಂದ ಬಿಲ್ಲೆಯನ್ನು ಹಾರಿ ತುಳಿಯುವುದು.
* ಅಂಕಣ ಬರೆಯುವುದು.
* ಮೊದಲ ಚೌಕಕ್ಕೆ ಬಿಲ್ಲೆ ಎಸೆಯುವುದು.
* ಘಟ್ಟದ ಚೌಕಗಳಲ್ಲಿ ವಿಶ್ರಾಂತಿ ಪಡೆದುಕೊಳ್ಳುವುದು

ಉ. ಈ ಕೆಳಗಿನ ಪದಗಳನ್ನು ನಿಮ್ಮ ಸ್ವಂತ ವಾಕ್ಯಗಳಲ್ಲಿ ಬಳಸಿ ಬರೆ.

೧. ಸರದಿ ೨. ಕುಣಿದು ಕುಪ್ಪಳಿಸು ೩. ಪಾಲಿಸು ೪. ಅವಸರ

**ನಾನಾರ್ಥ :** ಒಂದು ಪದಕ್ಕೆ ಇರುವ ಬೇರೆ ಬೇರೆ ಅರ್ಥಗಳಿಗೆ ನಾನಾರ್ಥ ಎನ್ನುವರು.

ಉದಾ : ಕಳೆ – ಶೋಭೆ ಕಳೆ – ಬೇಡವಾದ ಸಸ್ಯ

ಊ. ಕೊಟ್ಟಿರುವ ಪದಗಳಿಗೆ ನಾನಾರ್ಥಗಳನ್ನು ಬರೆ.

೧. ಆಡು ೨. ಕಾಡು ೩. ಹೊಳೆ ೪. ಹರಿ ೫. ಕವಿ

ಋ. ಚುಕ್ಕಿಗಳನ್ನು ಸೇರಿಸಿ ಕುಂಟೆಬಿಲ್ಲೆ ಅಂಕಣವನ್ನು ಪೂರ್ಣಗೊಳಿಸು.





## ಸಾಮರ್ಥ್ಯಾಧಾರಿತ ಚಟುವಟಿಕೆ

ಅ. ಈ ವಾಕ್ಯಗಳಲ್ಲಿನ ಸೂಚನೆಗಳಿಗೆ ಅಡಿಗೆರೆ ಹಾಕು.

**ಮಾದರಿ :** ನಿಧಾನವಾಗಿ ನಡೆ, ಇಲ್ಲವಾದರೆ ಬಿದ್ದು ಬಿಡುವೆ.

೧. ರಸ್ತೆ ದಾಟುವಾಗ ಎಡ ಬಲ ನೋಡಬೇಕು.

೨. ಗಲಾಟೆ ಮಾಡಬೇಡಿ, ಮಾಡಿದರೆ ಪಾಠ ಅರ್ಥವಾಗುವುದಿಲ್ಲ.

೩. ಆಟ ಆಟುವಾಗ ಎಚ್ಚರವಿರಲಿ, ಇಲ್ಲವಾದರೆ ಅಪಘಾತ ಆಗುವುದು.

೪. ಊಟ ಮಾಡುವಾಗ ಅವಸರ ಮಾಡಬಾರದು.

## ಭಾಷಾ ಚಟುವಟಿಕೆ

**ಅ. ಕೊಟ್ಟಿರುವ ಪದಗಳನ್ನು ಓದು. ಉಚ್ಚಾರ ಮತ್ತು ಅರ್ಥ ವ್ಯತ್ಯಾಸ ಗಮನಿಸು.**

೧. ಅರಸು – ಹರಸು

೨. ಅಲ್ಲಿ – ಹಲ್ಲಿ

೩. ಉಳಿ – ಹುಳಿ

**ಆ. ಮಾದರಿಯಂತೆ ಬದಲಾಯಿಸು.**

**ಮಾದರಿ :** ಆಡೋದು – ಆಡುವುದು

೧. ಮಾಡೋದು –

೨. ಬಿಡೋದು –

೩. ಬರೆಯೋದು –

೪. ತಳ್ಳೋದು –

**ಇ. ಮಾದರಿಯಂತೆ ಬರೆ.**

**ಮಾದರಿ :** ಅವನು ಆಟ ಆಡಿದ – ಅವನು ಆಟ ಆಡಲಿಲ್ಲ.

೧. ಅವಳು ಹಾಡು ಹೇಳಿದಳು –

೨. ನಾಯಿ ಜೋರಾಗಿ ಬೊಗಳಿತು –

೩. ಶಿಕ್ಷಕರು ಶಾಲೆಗೆ ಬಂದರು –

೪. ಅಮ್ಮ ಅಡುಗೆ ಮಾಡಿದಳು –

೫. ಅಜ್ಜ ಕಥೆ ಹೇಳಿದರು –

## ಚಟುವಟಿಕೆ

೧. ವಿಭಿನ್ನ ರೀತಿಯ ಕುಂಟೆಬಿಲ್ಲೆ ಅಂಕಣಗಳನ್ನು ಸಂಗ್ರಹಿಸು. ಆಡುವ ವಿಧಾನಗಳನ್ನು ಕೇಳಿ ತಿಳಿ.

೨. ಗ್ರಾಮೀಣ ಆಟಗಳನ್ನು ಹಿರಿಯರಿಂದ ಕೇಳಿತಿಳಿ.

೩. ಚೌಕಾಬಾರಾ ಆಟಕ್ಕೆ ನೀನೇ ಸೂಚನೆಗಳನ್ನು ಬರೆ.



# ಪಾಠ ೧೬ ಮುಳುಗದ ಸೂರ್ಯ (ಪದ್ಯ)

**ಸಾಮರ್ಥ್ಯ :** ಪದ್ಯದಲ್ಲಿನ ಮುಖ್ಯ ವಿಷಯ ಗುರುತಿಸುವುದು.

**ಓದಿಗೆ ಮುನ್ನ :** ಇಲ್ಲಿ ಕವಿಯೊಬ್ಬರು ಸಾಧಕರ ಬಗ್ಗೆ ಬರೆದಿದ್ದಾರೆ. ಆ ಸಾಧಕರ ಬಗ್ಗೆ ತಿಳಿಯುವ. ಜೊತೆಗೆ ಅವರ ಸಾಧನೆಯನ್ನು ಇತರರೊಂದಿಗೆ ಹಂಚಿಕೊಳ್ಳಿ.

ಅಂಧರ ಬಾಳಿನ ಸುಂದರ ಚಂದಿರ<br>
ಗದುಗಿನ ಗವಾಯಿ ಗಿರಿ ಶಿಖರ<br>
ಬೆಟ್ಟದಾಚೆ ತಾ ಬೆಳೆದು ನಿಂತನು<br>
ಪುಟ್ಟರಾಜ ಕವಿ ಪ್ರಭಾಕರ



ಕಣ್ಣುಗಳಿದ್ದೂ ಇಲ್ಲದ ಹಾಗೆ<br>
ಬದುಕುತ್ತಿರುವರು ಹಲವು ಜನ<br>
ಇರದೇ ಇದ್ದರು ಇದ್ದಂತಿಹರು<br>
ಸಾಧಕರಾಗಿ ಕೆಲವು ಜನ

ಕಟ್ಟಿ ಬೆಳೆಸಿ ತಾ ಹುಟ್ಟುಹಾಕಿದ<br>
ಗಾನಯೋಗಿಯು ಸ್ವರಲೋಕ<br>
ಸಾವಿರ ಸಾವಿರ ಅಂಧಮಕ್ಕಳಿಗೆ<br>
ಸಜ್ಜಾಯಿತು ಈ ಭೂಲೋಕ

ಬರೆದರು ನಾಟಕ ಪುರಾಣ ಚರಿತೆ<br>
ಅಳೆಯಲಿಕ್ಕಾಗದು ಪಾಂಡಿತ್ಯ<br>
ಸೂಸುತ್ತಿರುವುದು ಎಲ್ಲೆಡೆ ಸೌರಭ<br>
ಇವರದೆ ಆದ ಸಾಹಿತ್ಯ

ಹಕ್ಕಿಗಳುಲಿದವು ನಲಿದವು ಒಡನೆ
ಕಿನ್ನರಿ ನುಡಿಸಲು ತನ್ನೊಳಗೆ
ರಾಜ ರಾಜ ಕವಿ ಮಹಾರಾಜ
ಮುಳುಗದ ಸೂರ್ಯ ಧರೆಯೊಳಗೆ

– **ಫ.ಗು.ಸಿದ್ದಾಪುರ**

## ಓದಿ ತಿಳಿ

ಅಂಧ–ಕುರುಡ; ಉಲಿ–ದನಿ; ಧರೆ–ಭೂಮಿ; ಪ್ರಭಾಕರ–ಸೂರ್ಯ; ಸಜ್ಜು–ಸಿದ್ಧ; ಪಾಂಡಿತ್ಯ–ವಿದ್ವತ್ತು; ಸೂಸು–ಹರಡು; ಸೌರಭ–ಪರಿಮಳ; ಒಡನೆ–ಕೂಡಲೆ; ಗವಾಯಿ–ಹಾಡುಗಾರ;

## ಗಮನಿಸಿ ತಿಳಿ

ಕಿನ್ನರಿ – ಒಂದು ಬಗೆಯ ತಂತಿ ವಾದ್ಯ
ಶಿಖರ – ಬೆಟ್ಟ ಅಥವಾ ಗೋಪುರದ ತುದಿ
ಸಾಧಕರು – ವಿಶಿಷ್ಟ ಸಾಧನೆ ಮಾಡಿದವರು
ಸಾಹಿತ್ಯ – ಕಾವ್ಯ, ನಾಟಕ ಮುಂತಾದ ಭಾಷಿಕ ರಚನೆ
ಮುಳುಗದ ಸೂರ್ಯ – ಮರಣ ಹೊಂದಿದರೂ ತಾನು ಮಾಡಿದ ಕಾರ್ಯದಿಂದ ಜನಮನದಲ್ಲಿ ಉಳಿಯುವ ವ್ಯಕ್ತಿ



## ಪದ್ಯಾಧಾರಿತ ಅಭ್ಯಾಸ

**ಅ) ಒಂದೊಂದು ವಾಕ್ಯದಲ್ಲಿ ಉತ್ತರಿಸು.**

೧. ಗದುಗಿನ ಗವಾಯಿಯವರು ಯಾರ ಬಾಳಿನ ಚಂದಿರ?

________________________________

೨. ಗವಾಯಿಯವರು ಏನನ್ನು ಕಟ್ಟಿ ಬೆಳೆಸಿದರು?

________________________________

೩. ಕವಿ ಮುಳುಗದ ಸೂರ್ಯ ಎಂದು ಯಾರನ್ನು ಕರೆದಿದ್ದಾರೆ?

______________________________

## ಆ) ಎರಡು ಮೂರು ವಾಕ್ಯದಲ್ಲಿ ಉತ್ತರಿಸು.

೧. ಗವಾಯಿಯವರು ಮಾಡಿದ ಸಾಧನೆಗಳು ಯಾವುವು?

______________________________

______________________________

೨. ಭೂ ಲೋಕ ಸ್ವರ್ಗ ಲೋಕವಾದುದು ಹೇಗೆಂದು ಕವಿ ಹೇಳಿದ್ದಾರೆ?

______________________________

______________________________

## ಇ) ಈ ಅಪೂರ್ಣ ಸಾಲುಗಳನ್ನು ಪೂರ್ಣಗೊಳಿಸು.



೧. ಅಂಧರ ಬಾಳಿನ ______________

೨. ಬೆಟ್ಟದಾಚೆ ತಾ ______________

೩. ಹಕ್ಕಿಗಳುಲಿದವು ______________

೪. ಇರದೇ ಇದ್ದರು ______________

## ಈ) ವಾಕ್ಯಗಳಲ್ಲಿ ಬಿಟ್ಟಿರುವ ಸ್ಥಳದಲ್ಲಿ ಸರಿಯಾದ ಪದವನ್ನು ಆರಿಸಿ ತುಂಬು.

೧. ಕಣ್ಣುಗಳಿದ್ದೂ ಇಲ್ಲದಹಾಗೆ ಬದುಕಿರುವವರು ______________
(ಹಲವುಜನ, ಬಹಳಜನ, ಎಲ್ಲಜನ)

೨. ಹಕ್ಕಿಗಳುಲಿದವು ನಲಿದವು ಒಡನೆ ಕಿನ್ನರಿ ನುಡಿಸಲು ______________
(ನಿನ್ನೊಳಗೆ, ನಮ್ಮೊಳಗೆ, ತನ್ನೊಳಗೆ)

೩. ಬರೆದರು ನಾಟಕ, ಪುರಾಣ, ಚರಿತೆ ಅಳೆಯಲಿಕ್ಕಾಗದು ______________
(ಸಾಹಿತ್ಯ, ಸಾಂಗತ್ಯ, ಪಾಂಡಿತ್ಯ)

೪. ಬೆಟ್ಟದಾಚೆ ತಾ ಬೆಳೆದು ನಿಂತನು ಪುಟ್ಟರಾಜ ಕವಿ ______________

(ಸುಧಾಕರ, ಪ್ರಭಾಕರ, ಮನೋಹರ)

## ಸಾಮರ್ಥ್ಯಾಧಾರಿತ ಅಭ್ಯಾಸ

### ಅ) ಪದ್ಯವನ್ನು ಓದು ಪ್ರಶ್ನೆಗೆ ಉತ್ತರಿಸು.

ಪುಟ್ಟರಾಜರು 1914 ಮಾರ್ಚ್ 3ರಂದು ಹಾವೇರಿ ತಾಲ್ಲೂಕಿನ ದೇವಗಿರಿಯಲ್ಲಿ ಜನಿಸಿದರು. ತಂದೆ ರೇವಣ್ಣಯ್ಯ, ತಾಯಿ ಸಿದ್ದಮ್ಮ. ಪುಟ್ಟರಾಜರು ಚಿಕ್ಕಂದಿನಲ್ಲೇ ಕಣ್ಣುಬೇನೆಯಿಂದ ದೃಷ್ಟಿ ಕಳೆದು ಕೊಂಡರು. ಗುರು ಪಂಚಾಕ್ಷರಿ ಗವಾಯಿಗಳಲ್ಲಿ ಸಂಗೀತ ಇವರು ಶಿಕ್ಷಣ ಪಡೆದು ಸಂಗೀತ ಕ್ಷೇತ್ರದಲ್ಲಿ ಸಾಧನೆಗೈದರು. ಸಂಗೀತದ ಜೊತೆಗೆ ಸಾಹಿತ್ಯ ಹಾಗೂ ಸಾಮಾಜಿಕ ಕ್ಷೇತ್ರಗಳಲ್ಲೂ ಗಣನೀಯ ಸೇವೆ ಮಾಡಿದರು.



## ಭಾಷಾಭ್ಯಾಸ ಚಟುವಟಿಕೆ

### ಅ) ಮಾದರಿಯಂತೆ ಬರೆ.

ಮಾದರಿ: ನುಡಿ–ನುಡಿದರು

ಬರೆ – ______________

ನಡೆ – ______________

ನಲಿ – ______________

## ಭಾಷಾ ಚಟುವಟಿಕೆ

### ಅ) ಈ ಪದಗಳಿಗೆ ಎರಡು ಸಮಾನಾರ್ಥಕ ಪದಗಳನ್ನು ಬರೆ.

೧. ಚಂದಿರ : ____________ ____________

೨. ಸೂರ್ಯ : ____________ ____________

೩. ಧರೆ : ____________ ____________

**ಆ) ಅರ್ಥದ ಆಧಾರದಲ್ಲಿ ಗುಂಪಿಗೆ ಸೇರದ ಪದ ಗುರುತಿಸಿ ಬರೆ.**

೧. ನಾಟಕ, ಚರಿತ್ರೆ, ಚಿತ್ರ, ಪುರಾಣ ; ______________

೨. ಬೆಟ್ಟ, ನದಿ, ಪರ್ವತ, ಗಿರಿ : ______________

೩. ಮಂತ್ರಿ, ರಾಜ, ದೊರೆ, ಅರಸ : ______________

೪. ಗಾಯಕ, ಶಿಲ್ಪಿ, ಹಾಡುಗಾರ, ಗವಾಯಿ : ______________

**ಇ) ಈ ವಾದ್ಯಗಳನ್ನು ಗುರುತಿಸಿ ಹೆಸರು ಬರೆಯಿರಿ.**

   

______________ ______________ ______________ ______________

**ಈ) ಕೊಟ್ಟಿರುವ ವಾಕ್ಯಗಳಲ್ಲಿಯ ದ್ವಿರುಕ್ತಿ ಪದಗಳನ್ನು ಅಡಿಗೆರೆ ಎಳೆದು ಗುರುತಿಸು.**



೧. ಗವಾಯಿಗಳು ಸಾವಿರ ಸಾವಿರ ಅಂಧ ಮಕ್ಕಳಿಗೆ ಆಧಾರವಾದರು.

೨. ರಾಜರಾಜ ಕವಿ ಮಹಾರಾಜರೆಂದು ಪುಟ್ಟರಾಜರನ್ನು ಕವಿ ಕರೆದಿರುವರು.

೩. ಈ ಮಣ್ಣಿನ ಕಣಕಣದಲ್ಲೂ ಶೌರ್ಯ ಅಡಗಿದೆ.

**ಚಟುವಟಿಕೆ**

೧. ಸಂಗೀತ ಸಾಧಕರ ಬಗ್ಗೆ ಹಿರಿಯರಿಂದ ಕೇಳಿ ತಿಳಿ.



# ಅರ್ಥ ಸಹಿತ ಪದಕೋಶ

## ಅ

**ಅಗಸೆ** – ಊರು,ಕೋಟೆ ಮುಂತಾದವುಗಳ ಹೆಬ್ಬಾಗಿಲು

**ಅಚ್ಚರಿ** – ಆಶ್ಚರ್ಯ, ಬೆರಗು

**ಅಡಗು** – ಮರೆಯಾಗು, ಅವಿತುಕೊಳ್ಳು

**ಅಣೆಕಟ್ಟು** – ನೀರಿನ ಪ್ರವಾಹಕ್ಕೆ ಅಡ್ಡಲಾಗಿ ಹಾಕಿದ ಕಟ್ಟೆ

**ಅಣ್ಣೆಕಲ್ಲು** – ಆಟವಾಡುವಾಗ ಮೇಲಕ್ಕೆ ಹಾರಿಸಿ ಕೈಯೊಡ್ಡಿ ಹಿಡಿದುಕೊಳ್ಳುವ ಸಣ್ಣಕಲ್ಲು

**ಅತಿವೃಷ್ಟಿ** – ಮಿತಿ ಮೀರಿದ ಮಳೆ

**ಅನಾವೃಷ್ಟಿ** – ಮಳೆ ಬಾರದಿರುವಿಕೆ

**ಅಪೂರ್ವ**– ಹಿಂದಿಲ್ಲದ, ವಿಶೇಷ

**ಅಭಿನಯಿಸು** – ನಟಿಸು

**ಅಮಲ್ದಾರ** – ತಾಲೂಕಿನಲ್ಲಿ ತೆರಿಗೆಯನ್ನು ವಸೂಲು ಮಾಡುವ ಅಧಿಕಾರಿ

**ಅಮೂಲ್ಯ** – ಬೆಲೆ ಕಟ್ಟಲಾಗದ, ಶ್ರೇಷ್ಠವಾದ

**ಅಲಗು** – ಆಯುಧ

**ಅಲೆದಾಡು** – ಸುತ್ತಾಡು, ತಿರುಗಾಡು

**ಅವಸರ** – ತುರ್ತು, ವೇಗ

**ಅವಿವೇಕಿ** – ತಿಳುವಳಿಕೆ ಸಾಲದ

**ಅಂಕಣ** – ಎರಡು ಕಂಬಗಳ ನಡುವಿನ ಅವಕಾಶ

**ಅಂಗಾಲು** – ಕಾಲಿನ ಅಡಿ

**ಅಂಜುಬುರುಕ** – ಹೆದರಿಕೆ ಸ್ವಭಾವದ, ಪುಕ್ಕಲು

**ಅಂಧ** – ಕುರುಡ, ಕಣ್ಣು ಕಾಣದ

## ಆ

**ಆಜ್ಞೆ** – ಅಪ್ಪಣೆ, ಅನುಮತಿ, ಆದೇಶ

**ಆತಂಕ** – ಚಿಂತೆ

**ಆತುರ** – ಅವಸರ

**ಆರ್ಭಟಿಸು** – ಅಬ್ಬರಿಸು

**ಆಮಂತ್ರಿಸು** – ಕರೆ, ಹೇಳಿಕೆ

**ಆರಿಗೂ** – ಯಾರಿಗೂ

**ಆಲಿಸು** – ಕಿವಿಗೊಡು

## ಇ

**ಇರಿಯು** – ಚುಚ್ಚು

**ಇರುಳು** – ರಾತ್ರಿ

**ಇಹಲೋಕ** – ಈ ಲೋಕ, ಭೂ ಲೋಕ

## ಉ

**ಉತ್ತಮ** – ಶ್ರೇಷ್ಠ

**ಉತ್ಸವ** – ಹಬ್ಬ, ಸಡಗರ, ಸಂಭ್ರಮ

**ಉಲಿಯು** – ಧ್ವನಿ ಮಾಡು, ಕೂಗು

## ಋ

**ಋಷಿ** – ತಪಸ್ಸು ಮಾಡುವಾತ, ಮುನಿ

## ಎ

**ಎದೆಗುಂದು** – ಧೈರ್ಯಕೆಡು

**ಎಲಚಿ** – ಒಂದು ಜಾತಿಯ ಮರ

**ಎಸಳು** – ಹೂವಿನ ದಳ

**ಎಸೆ** – ಬಿಸಾಡು

**ಎಳ್ಳಷ್ಟು** – ಅತ್ಯಲ್ಪ, ತೀರಾ ಸ್ವಲ್ಪ

## ಒ

**ಒಡನಾಟ** – ಸಹವಾಸ, ಜೊತೆಯಲ್ಲಿರುವುದು

**ಒಡನೆ** – ಕೂಡಲೇ, ತಕ್ಷಣ

**ಒಳಾಂಗಣ ಆಟಗಳು** – ಮನೆಯೊಳಗೆ ಕುಳಿತು ಆಡುವ ಆಟಗಳು

## ಓ

**ಓರೆ** – ವಕ್ರ, ತುಸು ಬಾಗಿರು

## ಕ

**ಕಣ್ನೋಟ** – ಕಣ್ಣಿಗೆ ಕಾಣುವ ದೃಶ್ಯ

**ಕತ್ತು** – ಕುತ್ತಿಗೆ, ಕೊರಳು

**ಕರಗು** – ಮರುಗು, ಕನಿಕರಪಡು

**ಕಲರವ** – ಪಕ್ಷಿಗಳ ಕೂಗು

**ಕಲಿ** – ಶೂರ, ವೀರ, ಅರಿತುಕೊಳ್ಳುವುದು

**ಕಲಾ ಮೇಳ** – ಗಾನ ವಾದ್ಯಗಳಿಂದ ಕೂಡಿದ ನೃತ್ಯ ಅಥವಾ ಕಲಾಕಾರರ ಗುಂಪು

**ಕಸ್ತೂರಿ** – ಕಸ್ತೂರಿ ಮೃಗದ ಹೊಕ್ಕುಳಿಂದ ದೊರೆಯುವ ಒಂದು ಸುಗಂಧ ದ್ರವ್ಯ

**ಕಂಗೊಳಿಸು** – ಹೊಳೆಯು, ಶೋಭಿಸು

**ಕಂಚು** – ತಾಮ್ರ ಮತ್ತು ತವರ ಸೇರಿ ಆದ ಮಿಶ್ರಲೋಹ

**ಕಂತೆ** – ಕಟ್ಟು

**ಕಂದ** – ಮಗು, ಕೂಸು

**ಕಂಬಿ ಕೀಳು** – ಓಡಿ ಹೋಗು

**ಕಂಸಾಳೆ** – ಕಂಚಿನ ತಾಳ

**ಕಿಚ್ಚು** – ಬೆಂಕಿ

**ಕಿನ್ನರಿ** – ಒಂದು ಬಗೆಯ ತಂತೀ ವಾದ್ಯ

**ಕಿರಿಕಿರಿ** – ಕಾಟ, ಅಸಮಾಧಾನ

**ಕಿಸಾನ್** – ರೈತ

**ಕ್ಲಿಷ್ಟ** – ಕಷ್ಟವಾದ, ಕಠಿಣವಾದ

**ಕೀರ್ತಿ ಪತಾಕೆ** – ಯಶಸ್ಸಿನ ಬಾವುಟ

**ಕುಡಿ** – ಚಿಗುರು

**ಕುತೂಹಲ** – ಅಚ್ಚರಿ

**ಕುಂಟೆ ಬಿಲ್ಲೆ**– ಒಂದು ಬಗೆಯ ಜನಪದ ಆಟ

**ಕೇರಿ** – ಬೀದಿ, ಓಣಿ

**ಕೇರೆ** – ಒಂದು ಜಾತಿಯ ವಿಷವಿಲ್ಲದ ಹಾವು

## ಖ

**ಖಾತೆ ಕಿರ್ದಿ** – ಮನೆ, ಭೂಮಿ, ಮಾಲೀಕರ ವಿವರ ಇರುವ ಕಂದಾಯ ವಸೂಲಿ ಪುಸ್ತಕ

**ಖುಷಿ** – ಹಿಗ್ಗು, ಸಂತೋಷ

## ಗ

**ಗಣನೀಯ** – ಗುರುತಿಸಲು ಯೋಗ್ಯವಾದ

**ಗದರಿಸು** – ಹೆದರಿಸು

**ಗದ್ದಲ** – ಗಲಾಟೆ

**ಗವಾಯಿ** – ಹಾಡುಗಾರ, ಗಾಯಕ

**ಗಲಿವಿಲಿ** – ಗಲಾಟೆ, ಗೊಂದಲ

**ಗಾನಯೋಗಿ** – ಗಾಯನ ಕಲೆಯಲ್ಲಿ ಸಿದ್ಧಿ ಪಡೆದವ

**ಗಿರಿ ಶಿಖರ** – ಬೆಟ್ಟದ ತುದಿ

**ಗುಟುಕು** – ಒಂದು ಸಲ ಬಾಯಿಗೆ ಹಾಕಿಕೊಂಡು ಕುಡಿಯುವಷ್ಟು ದ್ರವ

**ಗುಟುರುಹಾಕು** – ಹಂದಿಗಳು ಮಾಡುವ ಧ್ವನಿ

**ಗುಪ್ತ** – ಗುಟ್ಟಾದ, ರಹಸ್ಯ

**ಗುಲಾಮ** – ಸೇವಕ

**ಗೋಳು** – ದುಃಖ

## ಘ

**ಘಟ್ಟ** – ಹಂತ

**ಘೋಷ** – ಧ್ವನಿ

**ಘೋಷಣೆ** – ಗಟ್ಟಿಯಾಗಿ ಹೇಳುವುದು

**ಘೋಷ ವಾಕ್ಯ** – ಸಂದೇಶವುಳ್ಳ ಒಂದು ನುಡಿ

## ಚ

**ಚಂಜೀಯ** – ಸಂಜೆಯ

**ಚಕಮಕಿ** – ಜಗಳ, ಘರ್ಷಣೆ

**ಚರ್ಚೆ** – ವಾದ

**ಚರ್ಮ ವಾದ್ಯ** – ಚರ್ಮದಿಂದ ಸಿದ್ಧಪಡಿಸಿರುವ ಸಂಗೀತ ಉಪಕರಣ

**ಚಳುವಳಿ** – ಹೋರಾಟ

**ಚಾತುರ್ಯ** – ಜಾಣತನ, ಬುದ್ಧಿವಂತಿಕೆ

**ಚಿತ್ತಾರ** – ಚಿತ್ರ

**ಚಿಣ್ಣಿದಾಂಡು** – ಒಂದು ಬಗೆಯ ಆಟ

**ಚಿಂತಾಕ್ರಾಂತ** – ಯೋಚನೆಗೆ ಒಳಗಾದ

**ಚಿಂಪಾಂಜಿ** – ಬಾಲವಿಲ್ಲದ ಒಂದು ಜಾತಿಯ ದೊಡ್ಡ ಮಂಗ

**ಚೀರು** – ಕೂಗು, ಕಿರಿಚುವುದು

## ಜ

**ಜರತಾರಿ** – ಜರಿಯಿಂದ ಕೂಡಿದ

**ಜಲಚರ** – ನೀರಿನಲ್ಲಿರುವ ಪ್ರಾಣಿ

**ಜಲಪಾತ** – ಮೇಲಿನಿಂದ ಕೆಳಗೆ ನೀರು ಧುಮುಕುವುದು

**ಜಾತ್ರೆ** – ಉತ್ಸವ, ಹಬ್ಬ, ಪರಿಸೆ

**ಜಿಗಿ** – ನೆಗೆ, ಹಾರು

**ಜೋಳಿಗೆ** – ಹೆಗಲಿಗೆ ಹಾಕುವ ಬಟ್ಟೆಯ ಚೀಲ

**ಜಂಭ** – ಅಹಂಕಾರ, ಸೊಕ್ಕು

## ಝ

**ಝರಿ** – ಹರಿದು ಬರುವ ಇಲ್ಲವೇ ಒಸರುವ ನೀರಿನ ಪ್ರವಾಹ

**ಝೇಂಕಾರ** – ದುಂಬಿಗಳ ಧ್ವನಿ

## ತ

**ತಗಡು** – ತೆಳುವಾದ ಲೋಹದ ಹಾಳೆ

**ತಪಸ್ಸು** – ಧ್ಯಾನ

**ತಳ್ಳು** – ನೂಕು, ದೂಡು

**ತಳಿರುತೋರಣ** – ಚಿಗುರಿನ ಎಲೆಗಳ ಮಾಲೆ

**ತಾಕು** – ತಾಗು

**ತಾಣ** – ನೆಲೆ, ಬೀಡು, ಸ್ಥಾನ

**ತಿವಿಯು** – ಚುಚ್ಚು, ಇರಿಯು

**ತುತ್ತೂರಿ** – ಒಂದು ಬಗೆಯ ಊದುವ ವಾದ್ಯ

**ತೂರಿಸು** – ದೂರಕ್ಕೆ ಹರಡಿಸುವುದು, ಧಾನ್ಯವನ್ನು ಗಾಳಿಗೆದುರಾಗಿ ಸುರಿಸುವುದು, ಚೆಲ್ಲುವುದು

**ತೆರ** – ರೀತಿ

**ತೆರಿಗೆ** – ಕಂದಾಯ, ಕರ, ಸುಂಕ

**ತೊಯ್ಯು** – ಒದ್ದೆಯಾಗು, ನೆನೆ

**ತೊಲೆ** – ಮರದ ದಿಮ್ಮಿ

**ತೋಪು** – ಮರಗಳ ಗುಂಪು

**ತ್ಯಜಿಸು** – ಬಿಡು

**ತಂಡ** – ಗುಂಪು, ಸಮೂಹ

## ಥ

**ಥಟ್ಟನೆ** – ಕೂಡಲೆ, ತಕ್ಷಣ

## ದ

**ದೂತ** – ಸುದ್ದಿಯನ್ನು ಕೊಂಡು ಹೋಗುವವನು, ಸೇವಕ

**ದೃಢ ಸಂಕಲ್ಪ** – ನಿರ್ಧಾರ

**ದೇವರ ಗುಡ್ಡ** – ದೇವರ ಭಕ್ತ

**ದೇಶದಾದ್ಯಂತ** – ದೇಶದಲ್ಲೆಲ್ಲಾ

**ದೊರೆ** – ರಾಜ, ಅರಸ

**ದಂಡ** – ಜುಲ್ಮಾನೆ, ಶಿಕ್ಷೆ

**ದಂಡೆ** – ದಡ, ಹೂವಿನ ಸರ

## ಧ

**ಧರಿಸು** – ತೊಡಿಸು

**ಧರೆ** – ಭೂಮಿ

**ಧಾವಿಸು** – ವೇಗವಾಗಿ ಚಲಿಸು, ಓಡಿ ಬರು

**ಧಿಕ್ಕರಿಸು** – ತಿರಸ್ಕರಿಸು

**ಧೀಮಂತಿಕೆ** – ಬುದ್ಧಿವಂತಿಕೆ, ಜಾಣ್ಮೆ

**ಧೀರ** – ಶೂರ, ಧೈರ್ಯವಂತ

**ಧುಮುಕು** – ಕೆಳಗೆ ಹಾರು, ಜಿಗಿ

**ಧೃತಿಗೆಡು** – ಧೈರ್ಯಗುಂದು

**ಧ್ವಜಸ್ತಂಭ** – ಧ್ವಜ ಹಾರಿಸುವ ಕಂಬ

## ನ

**ನಭ** – ಆಕಾಶ, ಆಗಸ

**ನಯ** – ನುಣುಪು

**ನಯನ** – ಕಣ್ಣು

**ನಸುಕು** – ಮುಂಜಾನೆ

**ನಳ** – ನಲ್ಲಿ

**ನಿನಾದ** – ಧ್ವನಿ

**ನಿರ್ಮಾಣ** – ರಚನೆ

**ನಿಮಿರು** – ನೆಟ್ಟಗೆ ನಿಲ್ಲು

**ನಿಯಂತ್ರಣ** – ಹತೋಟಿ, ಹಿಡಿತ

**ನಿರಾಯುಧ** – ಆಯುಧವಿಲ್ಲದೆ

**ನಿವಾರಿಸು** – ಹೋಗಲಾಡಿಸು, ಪರಿಹರಿಸು

**ನೇತೃತ್ವ** – ನಾಯಕತನ, ಮುಂದಾಳುತನ

**ನಿಂದನೆ** – ದೂಷಣೆ

## ಪ

**ಪಕ್ವ** – ಹಣ್ಣಾದ, ಚೆನ್ನಾಗಿ ಬೆಂದ, ಪರಿಪೂರ್ಣವಾದ

**ಪಟ್ಟಿಕೆಗಳು** – ಮರ, ಕಲ್ಲು, ಲೋಹ ಮುಂತಾದವುಗಳಿಂದ ರಚಿಸಿದ ಪಟ್ಟಿಗಳು

**ಪಣತೊಡು** – ಪ್ರತಿಜ್ಞೆ ಮಾಡು

**ಪತಾಕೆ** – ಬಾವುಟ, ಧ್ವಜ

**ಪರಂಪರೆ** – ಹಿಂದಿನಿಂದ ಬಂದ ಪದ್ಧತಿ,

**ಪರಿ** – ರೀತಿ

**ಪರಿವರ್ತನೆ** – ಬದಲಾವಣೆ, ಮಾರ್ಪಾಟು

**ಪರಿಶೀಲಿಸು** – ಸೂಕ್ಷ್ಮವಾಗಿ ಗಮನಿಸು, ಸೂಕ್ಷ್ಮವಾಗಿ ನೋಡು

**ಪಾದಚಾರಿ** – ಕಾಲುನಡಿಗೆಯಲ್ಲಿ ಸಾಗುವವನು

**ಪುಟಿದೇಳು** – ಮೇಲಕ್ಕೆ ಚಿಮ್ಮು, ಮೇಲಕ್ಕೆ ಹಾರು

**ಪೇಳು** – ಹೇಳು

**ಪೌರಾಣಿಕ**– ಪುರಾಣ ಕಥೆಗಳಿಗೆ ಸಂಬಂಧಿಸಿದ್ದು

**ಪಾಂಡಿತ್ಯ** – ವಿದ್ವತ್ತು, ಜ್ಞಾನ

ಪ್ರಕಟಿಸು – ಹೊರತರು

ಪ್ರಚಲಿತ – ರೂಢಿಯಲ್ಲಿರುವ

ಪ್ರತಿಭಟಿಸು – ವಿರೋಧಿಸು

ಪ್ರತ್ಯಕ್ಷ – ಕಾಣಿಸು

ಪ್ರಭಾತಪೇರಿ – ಬೆಳಗಿನ ಜಾವದಲ್ಲಿ ನಡೆಸುವ ಮೆರವಣಿಗೆ

ಪ್ರವೇಶಿಸು – ಒಳಗೆ ಹೋಗು

ಪ್ರಸಂಗ – ಯಕ್ಷಗಾನ ಬಯಲಾಟಗಳಲ್ಲಿರುವ ಕಥಾನಕ

ಪ್ರಸಿದ್ಧ – ಕೀರ್ತಿಶಾಲಿ, ಖ್ಯಾತ

ಪ್ರಾಂಗಣ – ಅಂಗಳ

ಪ್ರೇರಿತ – ಪ್ರಚೋದಿತ

ಫಲಕ – ಬರೆಹದ ಹಲಗೆ

## ಬ

ಬಲಿದಾನ – ತಾಯಿನಾಡು ಮತ್ತು ನಾಡ ಜನರ ಒಳಿತಿಗಾಗಿ ಮಾಡುವ ಜೀವದಾನ

ಬಳಸು – ಉಪಯೋಗಿಸು, ಸುತ್ತುಗಟ್ಟು

ಬಳುಕು – ಅತ್ತಿತ್ತ ಬಾಗು, ಓಲಾಡು, ತೊನೆದಾಡು

ಬಾನು – ಆಕಾಶ

ಬೀರು – ಹಂಚು, ವಿತರಿಸು

ಬೀಸಣಿಕೆ – ಗಾಳಿ ಬೀಸಿಕೊಳ್ಳಲು ಬಳಸುವ ಒಂದು ಸಾಧನ

ಬೇಜವಾಬ್ದಾರಿ – ಜವಾಬ್ದಾರಿ ಇಲ್ಲದಿರುವಿಕೆ

ಬೋಳಾಗು – ಬರಿದಾಗು

ಬಂಡೇಳು – ದಂಗೆ

ಬಿಂದಿಗೆ – ಕೊಡ

## ಭ

ಭವನ – ದೊಡ್ಡ ಮನೆ

ಭಸ್ಮ – ಬೂದಿ

ಭಾಜನ – ಪಾತ್ರರಾದ, ಅರ್ಹರಾದ

ಭಾವಚಿತ್ರ – ವ್ಯಕ್ತಿಯ ಚಿತ್ರ

ಭಾನು – ಸೂರ್ಯ

ಭಿತ್ತಿಪತ್ರ – ಪ್ರಚಾರಕ್ಕಾಗಿ ಗೋಡೆಗಳಿಗೆ ಅಂಟಿಸುವ ಪತ್ರ

ಭಿನ್ನ – ಬೇರೆ

ಭೋರ್ಗರೆ – ನೀರು ಪ್ರವಹಿಸುವಾಗ ಅಥವಾ ಹರಿಯುವಾಗ ಉಂಟು ಮಾಡುವ ಸದ್ದು

ಭಂಗಿ – ನಿಲುವು

## ಮ

ಮಟ್ಟಸ – ಏರು – ತಗ್ಗು ಇಲ್ಲದಿರುವುದು

ಮಣಿಸು – ಸೋಲಿಸು

**ಮಧುರ**–ಇಂಪಾದ

**ಮನಸೆಳೆ** – ಮನಸ್ಸನ್ನು ಆಕರ್ಷಿಸು

**ಮನಸೋಲು** – ಮರುಳಾಗು

**ಮನೆಮಾತು** – ಎಲ್ಲರಿಗೂ ತಿಳಿದ ವಿಷಯ

**ಮನೋಹರ** – ಬಹುಸುಂದರವಾದ

**ಮರ ಕೋತಿಆಟ** – ಮರವನ್ನು ಹತ್ತಿ ಇಳಿದು ಆಡುವ ಆಟ

**ಮಲೆ** – ಬೆಟ್ಟ

**ಮಾರ್ಗದರ್ಶನ** – ದಾರಿತೋರುವುದು

**ಮಾರು** – ಎರಡು ಕೈಗಳನ್ನು ಅಡ್ಡಲಾಗಿ ಚಾಚಿದಷ್ಟು ಉದ್ದ

**ಮಾಲೀಕ** – ಯಜಮಾನ, ಒಡೆಯ

**ಮಿತವಾಗಿ** – ಅಗತ್ಯಕ್ಕೆ ತಕ್ಕಷ್ಟು

**ಮಿಶ್ರಿತ** –ಕೂಡಿದ

**ಮುಕ್ತ ಕಂಠ** – ನೇರವಾಗಿ ಹೇಳುವುದು

**ಮುಗ್ಧ** – ಮೋಸವನ್ನು ತಿಳಿಯದ

**ಮುಗಿಬೀಳು** – ಕವಿಯು, ಮುತ್ತುವುದು

**ಮುಗಿಲು** – ಮೋಡ

**ಮೂದಲಿಸು** – ಹಂಗಿಸು, ಹೀಯಾಳಿಸು

**ಮೃಗಾಲಯ** – ಪ್ರಾಣಿ, ಪಕ್ಷಿ, ಹಾವುಗಳನ್ನು ಪ್ರದರ್ಶನಕ್ಕಾಗಿ ಕೂಡಿಡುವ ಸ್ಥಳ

**ಮೊಕದ್ದಮೆ** – ಆಪಾದನೆಯನ್ನು ಆಧರಿಸಿ ಆಪಾದಿತನ ಮೇಲೆ ಆರೋಪ ಪಟ್ಟಿಯನ್ನು ಸಿದ್ಧಪಡಿಸುವುದು

**ಮೌಖಿಕ** – ಬಾಯ್ದೆರೆ

**ಮುಂಡಾಸು** – ಪೇಟ, ರುಮಾಲು

## ರ

**ರಾಷ್ಟ್ರನಾಯಕರು** – ದೇಶ ಸೇವೆ ಮಾಡಿದವರು

**ರಾಷ್ಟ್ರಾದ್ಯಂತ** – ದೇಶದಲ್ಲೆಲ್ಲಾ

**ರಾಷ್ಟ್ರೀಯ ಹಬ್ಬ** – ದೇಶಕ್ಕೆ ಸಂಬಂಧಿಸಿದ ಹಬ್ಬ

**ರೊಚ್ಚಿಗೇಳು** – ಕೋಪಗೊಳ್ಳು

**ರಂಗಸ್ಥಳ** – ನಾಟಕ, ನೃತ್ಯ, ಯಕ್ಷಗಾನ, ಬಯಲಾಟ, ಮೊದಲಾದುವುಗಳನ್ನು ಪ್ರದರ್ಶಿಸುವ ವೇದಿಕೆ ಅಥವಾ ಸ್ಥಳ

**ರಂಗವಲ್ಲಿ** – ಕಲ್ಲಿನ ಪುಡಿ ಇಲ್ಲವೇ ಹಿಟ್ಟು – ಮೊದಲಾದುವುಗಳಿಂದ ನೆಲದ ಮೇಲೆ ಮಾಡಿದ ಅಲಂಕಾರ

## ಲ

**ಲಕ್ಷ್ಯ** – ಗಮನ

**ಲಭಿಸು** – ದೊರಕು, ಸಿಗು

**ಲಯ** – ಸಂಗೀತ ನೃತ್ಯ ಕಾವ್ಯಗಳಲ್ಲಿರುವ ಗತಿ

**ಲಾಠಿ** – ಬಿದಿರಿನ ಕೋಲು

**ಲೂಟಿ** – ದೋಚು

**ಲೇಖನ** – ಬರವಣಿಗೆ, ಬರೆಹ

**ಲಾಂಛನ** – ಗುರುತು, ಮುದ್ರೆ, ಚಿಹ್ನೆ

## ವ

**ವಲಸೆ** – ಜನರು ತಮ್ಮ ಅಗತ್ಯಕ್ಕೆ ತಕ್ಕಂತೆ ಊರಿಂದ ಊರಿಗೆ ವಾಸಿಸಲು ಹೋಗುವುದು, ಒಕ್ಕಲು ಹೋಗುವುದು.

**ವಿಜೇತರು** – ಗೆದ್ದವರು

**ವಿನ್ಯಾಸ** – ರಚನೆ

**ವಿಭೂತಿ** – ಬೂದಿ, ಭಸ್ಮ

**ವೃಕ್ಷ** – ಮರ

**ವೈಖರಿ** – ರೀತಿ, ಶೈಲಿ

## ಶ

**ಶಮನ** – ಶಾಂತಗೊಳಿಸುವಿಕೆ

**ಶಿಖರ** – ಬೆಟ್ಟದ ತುದಿ

**ಶೂನ್ಯ** – ಬರಿದಾದುದು, ಇಲ್ಲವಾದುದು

## ಸ

**ಸಜ್ಜು** – ಸಿದ್ಧತೆ

**ಸದ್ಗತಿ** – ಒಳ್ಳೆಯ ಗತಿ

**ಸನಿಹ** – ಹತ್ತಿರ, ಸಮೀಪ

**ಸಮರ** – ಯುದ್ಧ

**ಸಮವಸ್ತ್ರ** – ಒಂದೇ ರೂಪದ ಉಡುಪು

**ಸರದಿ** – ಅನುಕ್ರಮ, ಪಾಳಿ

**ಸರಾಗವಾಗಿ** – ಸುಲಭವಾಗಿ

**ಸಲಹೆ** – ಸೂಚನೆ

**ಸಲಾಕೆ** – ಈಟಿ, ಉದ್ದವಾದ ಸರಳು

**ಸಹನೆ** – ತಾಳ್ಮೆ

**ಸಾಧಕರು** – ಕಾರ್ಯ ಸಾಧನೆ ಮಾಡಿದವರು

**ಸಾಧ್ಯತೆ** – ಆಗಬಹುದಾದದ್ದು,

**ಸುಭಾಷಿತ** – ಒಳ್ಳೆಯ ಮಾತು

**ಸುಸ್ತು** – ದಣಿವು

**ಸುಳಿಯು** – ತಿರುಗು, ಅಲೆದಾಡು

**ಸೂಚನಾಫಲಕ** – ಸೂಚನೆಗಳನ್ನು ಬರೆದು ಪ್ರಕಟಿಸಿರುವ ಹಲಗೆ

**ಸೂಸು** – ಹರಡು

**ಸೃಷ್ಟಿ** – ನಿರ್ಮಾಣ, ರಚನೆ

**ಸೌರಭ** – ಪರಿಮಳ

**ಸಂಭ್ರಮ** – ಸಂತೋಷ

**ಸಂರಕ್ಷಿಸು** – ಕಾಪಾಡು

**ಸಿಂಗರಿಸು** – ಅಲಂಕರಿಸು

**ಸ್ಪರ್ಧೆ** – ಪಂಥ

**ಸ್ವಾತಂತ್ರ್ಯ ಚಳುವಳಿ** ಸ್ವಾತಂತ್ರ್ಯಕ್ಕಾಗಿ ಜನರು ಮಾಡಿದ ಸತ್ಯಾಗ್ರಹ

**ಸ್ವಂತಿಕೆ** – ತನ್ನದೇ ಆದ ಖಾಸಗಿ

## ಹ

**ಹರಸು** – ಆಶೀರ್ವದಿಸು

**ಹವಳ** – ಒಂದು ಜಾತಿಯ ಕೆಂಪು ಮಣಿ

**ಹಸೆ** – ಶುಭಕಾರ್ಯಗಳಿಗೆ ಹಾಕುವ ಆಸನ

**ಹಾದಿ** – ದಾರಿ

**ಹುಟ್ಟುಹಾಕು** – ಸ್ಥಾಪಿಸು

**ಹೊಯ್** – ಹೊಡೆ

**ಹೋರಾಟ** – ಜಗಳ, ಕಾಳಗ

**ಹೌಹಾರು** – ಬೆಚ್ಚಿಬೀಳು, ಗಾಬರಿ

**ಹಂಚಿಕೊಳ್ಳು** – ಪಾಲುಮಾಡು, ವಿತರಿಸು

**ಹಿಂದೆ ಸರಿ** – ಹಿಮ್ಮೆಟ್ಟು, ಹಿಂದಕ್ಕೆ ಹೋಗುವುದು





